ಸಂಪುಟ ೧೬ ಸಂಚಿಕೆ ೧ ಮಾರ್ಚ್ 1995

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕಿಂಗ್ ಪ್ರಪಂಚ

ಸಂ. ೧೬ ಮಾರ್ಚ್ ೧೯೯೫ ಸಂ. ೧

# ಪ್ರಿಯ ಓದುಗರೆ

'ಬ್ಯಾಂಕಿಂಗ್ ಪ್ರಪಂಚ'ದ ಹದಿನೈದನೆಯ ಸಂಪುಟ ಮುಗಿದಿದೆ. ಇದರೊಂದಿಗೆ ಹದಿನಾರನೆಯ ಸಂಪುಟ ಆರಂಭ.

ಸಂಚಿಕೆಗಳ ಲೆಕ್ಕ ಹಾಕುವುದಾದರೆ ಇದು ತೊಂಬತ್ತೊಂಬತ್ತನೆಯ ಸಂಚಿಕೆ. ಮುಂದಿನ ಜೂನ್ ತಿಂಗಳಿನದು ಐವತ್ತನೆಯ ಸಂಚಿಕೆ.

ಚಲನಚಿತ್ರವೊಂದು ಐವತ್ತು ದಿನವೋ ನೂರು ದಿನವೋ ನಡೆದರೆ ಅದು ಅದ್ದೂರಿಯ ಸಮಾರಂಭಕ್ಕೆ ನಿಮಿತ್ತ. ಗಲ್ಲಾ ಪೆಟ್ಟಿಗೆಯ ತುಂಬ ಜಣಜಣ ಹಣ.

ಆ ಸಂಭ್ರಮದ ಸಮಯದಲ್ಲಿ ಚಿತ್ರನಿರ್ಮಾಪಕರು, ನಿರ್ದೇಶಕರು ಮುಂತಾದ ಸಮಸ್ತರೂ ತಮ್ಮ ಹಿಂದಿನ ಹೋರಾಟ ಸಾರ್ಥಕವಾಯಿತು ಎಂದುಕೊಳ್ಳುತ್ತಾರೆ. ಅಭಿಮಾನಿಗಳ ಮಹಾಪೂರದಿಂದ ಪುಳಕಿತರಾಗುತ್ತಾರೆ, ನವೋತ್ಸಾಹವನ್ನು ತುಂಬಿಕೊಳ್ಳುತ್ತಾರೆ. ಮತ್ತೊಂದು ಕಲಾಸೃಷ್ಟಿಗಾಗಿ ಅವರ ಮನಸ್ಸು ತುಡಿಯುತ್ತದೆ.

ಆದರೆ 'ಬ್ಯಾಂಕಿಂಗ್ ಪ್ರಪಂಚ'ದ ಸ್ವರೂಪವೇ ಬೇರೆ. ಇದು ಮೋಡದ ಮೇಲೆ ಕುಳಿತು ಸಾಗುವ ಅನೂಹ್ಯಲೋಕದ ಅನಂತ ಯಾತ್ರೆಯಲ್ಲ. ಆದರೆ ಗಾಳಿಯನ್ನು ಗುದ್ದಿ ನೋಯಿಸಿಕೊಳ್ಳುವ ಕೆಲಸವೂ ಅಲ್ಲ. ಕಾಡು ಕಡಿದು, ನೆಲ ಅಗೆದು, ಹಾದಿ ಸುಗಮಗೊಳಿಸುವ ಕೆಲಸ. ಇದು ವೈಭವದ ಮೆರವಣಿಗೆಯಲ್ಲ. ಆಚೀಚೆ ಒತ್ತರಿಸಿ ನಿಂತ ಜನಸ್ತೋಮದ ಜಯಕಾರವನ್ನು ನಿರೀಕ್ಷಿಸುವಂತಿಲ್ಲ, ಇಲ್ಲಿ ಗೆಲ್ಲಂಬಗಳಿಲ್ಲ.

ಹದಿನೈದು ವರ್ಷ ಹಿಂದೆ 'ಬ್ಯಾಂಕಿಂಗ್ ಪ್ರಪಂಚ'ವನ್ನಾರಂಭಿಸಿದಾಗಿನ ಪರಿಸ್ಥಿತಿಯನ್ನೂ ಇಂದಿನದನ್ನೂ ಹೋಲಿಸಿದಾಗ ಆಶ್ಚರ್ಯವೇ ಆಗುತ್ತದೆ. ಆರ್ಥಿಕ ಕ್ಷೇತ್ರದಲ್ಲಿ ಅಗಾಧ ಬದಲಾವಣೆಗಳಾಗಿವೆ. ಬಹುತೇಕ ರಾಷ್ಟ್ರೀಕರಣಗೊಂಡ ಬ್ಯಾಂಕಿಂಗ್ ವ್ಯವಸ್ಥೆ ಆಗ ವಿಸ್ತರಣಶೀಲವಾಗಿತ್ತು. ಬ್ಯಾಂಕು ಏನು ಸಾಧಿಸಬೇಕು, ಏನು ಸಾಧಿಸಬಹುದು—ಎಂಬುದರ ಕನಸೊಂದು ಕಣ್ಮುಂದೆ ಮಿಂಚುತ್ತಿತ್ತು.

ಆದರೆ ಅದರೊಂದಿಗೇ ಸಮಸ್ಯೆಗಳೂ ಸೃಷ್ಟಿಯಾದುವು. ರಾಷ್ಟ್ರೀಕರಣವೊಂದೇ, ಬ್ಯಾಂಕಿಂಗಿನ ವ್ಯಾಪಕಜಾಲವೊಂದೇ ಸಾಲದು ಎನಿಸಕೊಡಗುತ್ತಿದೆ, ಈಗೀಗ.

ಹೊಸ ಆರ್ಥಿಕ ನೀತಿಯ ಗಾಳಿ ಬ್ಯಾಂಕಿಂಗಿನ ಮೇಲೂ ಬೀಸಿದೆ. ಸೇವೆ ಮತ್ತು ಲಾಭ–ಇವೆರಡರ ಸಮನ್ವಯ ಹೇಗೆ ಎಂಬುದು ಇಂದಿನ ಪ್ರಶ್ನೆ. 'ಅಕ್ಕಿಯ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿ.'

ರಾಷ್ಟ್ರೀಕೃತ ಬ್ಯಾಂಕುಗಳು ಸ್ಪರ್ಧಾತ್ಮಕವಾಗಿ ಕೆಲಸ ಮಾಡಬೇಕು; ಖಾಸಗಿ ವಲಯದ ಬ್ಯಾಂಕುಗಳೊಂದಿಗೂ ವಿದೇಶಿ ಬ್ಯಾಂಕುಗಳೊಂದಿಗೂ ಸೆಣಸಬೇಕು; ಆ ಸಾಮರ್ಥ್ಯ ಗಳಿಸಬೇಕು. 'ಲಾಭಪ್ರದತೆ' ಇದರ ಅಳತೆಗೋಲು—ಎಂಬ ಮಾತಿಗೆ ಮನ್ನಣೆ ದೊರಕಿದೆ.

ಅವಕ್ಕೆ ಈ ಸಾಮರ್ಥ್ಯ ದೊರಕಬೇಕಾದರೆ ಬಂಡವಾಳ ತಕ್ಕಮಟ್ಟಿಗೆ ಇರಬೇಕು, ವ್ಯವಹಾರದ ಗುಣಮಟ್ಟ ಹೆಚ್ಚಬೇಕು. ಕೊಟ್ಟ ಸಾಲ ಹಿಂದಕ್ಕೆ ಬರಬೇಕು, ಆದಾಯವನ್ನು ತರಬೇಕು. ಎಂದ ಮೇಲೆ ಸಾಲದ ಉತ್ಪಾದಕತೆಯ ಕಡೆಗೂ ಗಮನ ಹರಿಸಬೇಕು.

ಗುಣಾತ್ಮಕತೆಗೆ ಹೆಚ್ಚು ಒತ್ತು ನೀಡುವುದೆಂದರೆ ಕಡಮೆ ವೆಚ್ಚದಲ್ಲಿ ಹೆಚ್ಚು ಸೇವೆ ಮಾಡುವ ಸಾಧ್ಯತೆ, ಅಸಮರ್ಥ ಘಟಕಗಳ ನಿವಾರಣೆ, ಸಿಬ್ಬಂದಿಯ ದಕ್ಷತೆ, ಕಂಪ್ಯೂಟರ್ ಅಳವಡಿಕೆ, ಸಮುದಾಯದಲ್ಲಿ ಭದ್ರವಾಗಿ ಕಾಲೂರಿಯೂ ಗಗನದತ್ತ ನೆಗೆಯುವ ಸಾಹಸ. ವಿಶ್ವಮಾನವತೆಯ ಒಂದು ಹೊಸ ಪರಿಕಲ್ಪನೆ.

ಬಹಳ ಸರಳವೆನಿಸುವ ಈ ವಿಚಾರದ ಅನ್ವಯ ಕಷ್ಟಸಾಧ್ಯ. ಹೊಸ ದರ್ಶನವೊಂದಕ್ಕೆನಾವೆಲ್ಲ ಸಿದ್ಧವಿದ್ದೇವೆಯೆ? 'ಗಂಡುಸಾದರೆ ನಿನ್ನ ಬಲಿಕೊಡುವೆಯೇನು?' ಎಂಬಂಥ ಸವಾಲು.

ರಾಷ್ಟ್ರೀಕರಣದ ಬೆಳ್ಳಿಹಬ್ಬದ ಸಮಯದಲ್ಲಿ ಸಂಭ್ರಮಕ್ಕಿಂತ ವಿಷಾದವೇ ಹೆಚ್ಚಾಗಿದೆ. ಬ್ಯಾಂಕ್ ಉದ್ಯೋಗಿ ಎಷ್ಟು ಸಂತುಷ್ಟ ಎಂಬ ಪ್ರಶ್ನೆಯೂ ಪ್ರಧಾನವಾಗಿದೆ. ಬ್ಯಾಂಕುಗಳಲ್ಲಿ ಬತ್ತಿ ಬೆಳೆಯುವ ದೂರುಗಳಂತೂ ಅಸಂಖ್ಯಾತ. ಖಾಸಗಿ ವಲಯದೊಂದಿಗೆ ಸರ್ಕಾರಿ ಬ್ಯಾಂಕುಗಳು ಸ್ಪರ್ಧಿಸಬಲ್ಲುವೆ? ಇಂಥ ವಿಚಾರಗಳನ್ನು ಕುರಿತ ಲೇಖನಗಳು ಈ ಸಂಚಿಕೆಯಲ್ಲಿವೆ. ಭಾರತೀಯ ಬ್ಯಾಂಕಿಂಗು ಕವಲುದಾರಿಯಲ್ಲಿದೆಯೆಂಬುದಕ್ಕೆ ಈ ಲೇಖನಗಳು ದ್ಯೋತಕ ಎನಿಸುತ್ತದೆ. ಹದಿನೈದು ವರ್ಷ ಹಿಂದೆ, 'ಬ್ಯಾಂಕಿಂಗ್ ಪ್ರಪಂಚ'ವನ್ನಾರಂಭಿಸಿದಾಗ, ನಮ್ಮ ವಿಚಾರಗಳು ಈ ಸಿಟ್ಟಿನಲ್ಲಿ ಹರಿಯುತ್ತಿರಲಿಲ್ಲ.

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಆಗಾಗ ನಡೆಯುತ್ತಿರುವ ಎಲ್ಲ ಚಿಂತನೆಗಳಿಗೂ 'ಬ್ಯಾಂಕಿಂಗ್ ಪ್ರಪಂಚ' ಕನ್ನಡಿಯಾಗಿದೆ. ಇದು ನಮಗೆ ನೆಮ್ಮದಿ ನೀಡುವ ಸಂಗತಿ.

—ಸಂಪಾದಕ

# ಖಾಸಗಿ ಮತ್ತು ಸಾರ್ವಜನಿಕ ವಲಯ ಬ್ಯಾಂಕುಗಳು

**ಕೆ. ಎನ್. ಮಹಾಬಲ**
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ಶಾಖೆ

ಖಾಸಗಿ ವಲಯದ ಬ್ಯಾಂಕುಗಳು ಬ್ಯಾಂಕಿಂಗ್ ರಂಗವನ್ನು ಪ್ರವೇಶಿಸಿದ್ದಾಗ್ಯೂ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇನ್ನೂ ಅವಕಾಶವುಂಟು. ಗ್ರಾಹಕರ ಆಕಾಂಕ್ಷೆ ಅಭಿಲಾಷೆಗಳ ಎತ್ತರಕ್ಕೆ ಏರಲು ರಾಷ್ಟ್ರೀಕೃತ ಬ್ಯಾಂಕುಗಳು ಪ್ರಯತ್ನಿಸುವುದು ಅವುಗಳ ಉಳಿವಿಗೆ ಅಗತ್ಯವಾಗಿದೆ. ಖಾಸಗಿ ವಲಯ ಬ್ಯಾಂಕುಗಳ ಅಸ್ತಿತ್ವವನ್ನೂ ಒಂದು ಸವಾಲಾಗಿ ಪರಿಗಣಿಸಿ ರಾಷ್ಟ್ರೀಕೃತ ಬ್ಯಾಂಕುಗಳು ಪುನರ್ರಚನೆ ಸುಧಾರಣೆಗಳತ್ತ ಗಮನ ಹರಿಸಬೇಕು.

ಇತ್ತೀಚೆಗೆ ಭಾರತಕ್ಕೆ ಭೇಟಿ ಇತ್ತಿದ್ದ ಅಮೆರಿಕಾದ ವಾಣಿಜ್ಯ ಕಾರ್ಯದರ್ಶಿ ರಾಬರ್ಟ್ ಬ್ರೌನ್, ಭಾರತದಲ್ಲಿ ವಿದೇಶಿ ಬಂಡವಾಳ ಹೆಚ್ಚಬೇಕಾದರೆ ಬ್ಯಾಂಕಿಂಗ್ ವಲಯದಲ್ಲಿ ಉದಾರೀಕರಣ ಪ್ರಕ್ರಿಯೆ ಮತ್ತಷ್ಟು ಉದಾರವಾಗಿ ನಡೆಯಬೇಕು ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನಮ್ಮ ಹಣಕಾಸು ಸಚಿವರಂತೂ ಪದೇಪದೇ ಹಲವಾರು ವೇದಿಕೆಗಳಲ್ಲಿ ಆರ್ಥಿಕ ನೀತಿಗಳ, ಅದರಲ್ಲೂ ವಿಶೇಷವಾಗಿ ಬ್ಯಾಂಕಿಂಗ್ ಕ್ಷೇತ್ರದ, ಉದಾರೀಕರಣ, ಖಾಸಗೀಕರಣ ಮುಂತಾದುವುಗಳ ಮಹತ್ವವನ್ನು ಮನವರಿಕೆ ಮಾಡಿಕೊಡುವ ನಿರಂತರ ಯತ್ನದಲ್ಲಿದ್ದಾರೆ.

ಜನಸಾಮಾನ್ಯರಂತೂ ಸರಿಯೇ ಸರಿ. ಸಣ್ಣ ಠೇವಣಿದಾರ, ರೈತ, ಸಣ್ಣ ಉದ್ಯಮಿ ಯಾರೇ ಇರಲಿ ಅವರ ಮಂತ್ರ, ಖಾಸಗೀಕರಣ, ಖಾಸಗೀಕರಣ. ಬೃಹತ್ ಕಂಪನಿ ವಲಯದ ಗ್ರಾಹಕರಂತೂ ತಮ್ಮ ಉದ್ಯಮದ ಕನಸುಗಳನ್ನೆಲ್ಲ ಖಾಸಗಿ ಬ್ಯಾಂಕುಗಳ ಮೂಲಕ ಸಾಕಾರಗೊಳಿಸಿಕೊಳ್ಳುವ ಹವಣಿಕೆಯಲ್ಲಿದ್ದಾರೆ.

ಅಂತೂ ಖಾಸಗಿ ಬ್ಯಾಂಕುಗಳು ಪದಾರ್ಪಣ ಮಾಡಿಯೇ ಬಿಟ್ಟಿವೆ. ಇವು ರಾಷ್ಟ್ರೀಕರಣಗೊಂಡಿರುವ ಮತ್ತು ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಪ್ರತಿಸ್ಪರ್ಧಿಗಳೆ ? ಬ್ಯಾಂಕ್ ರಾಷ್ಟ್ರೀಕರಣ ವಿಫಲವೆ ? ಮುಂತಾದ ನಿರ್ಣಾಯಕ ಅಂಶಗಳತ್ತ ಗಮನ ಹರಿಸುವುದು ಇಂದಿನ ಅಗತ್ಯವಾಗಿದೆ.

**ರಾಷ್ಟ್ರೀಕರಣದ ಪರಿಣಾಮಗಳು**

1969ರಲ್ಲಿ ದೇಶದ ಹದಿನಾಲ್ಕು ಪ್ರಮುಖ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿದ ಪ್ರಧಾನ ಉದ್ದೇಶ ಜನಸಂಪರ್ಕದ ಅತ್ಯಂತ ಪ್ರಭಾವಶಾಲಿ ಮಾಧ್ಯಮವಾದ ಬ್ಯಾಂಕುಗಳ ಜಾಲವನ್ನು ದೇಶದ ಉದ್ದಗಲದಲ್ಲಿ ಮತ್ತು ವಿಶೇಷವಾಗಿ ಬ್ಯಾಂಕಿಂಗ್ ಸೌಲಭ್ಯಗಳಿಲ್ಲದ ವಿದೂರ ಸ್ಥಳಗಳಲ್ಲಿ ವ್ಯಾಪಿಸುವುದು. ಈ ಉದ್ದೇಶ ಪ್ರಪಂಚವೇ ಬೆರಗಾಗುವ ರೀತಿಯಲ್ಲಿ ನೆರವೇರಿತು. ಅದುವರೆಗೂ ಬ್ಯಾಂಕುಗಳ ಹೆಸರನ್ನೇ ಕೇಳದಿದ್ದವರು, ಅಡಿಯಿರಿಸಲು ಹೆದರುತ್ತಿದ್ದವರು ಬ್ಯಾಂಕಿಂಗ್ ವ್ಯವಸ್ಥೆಯ ಅನುಕೂಲಗಳನ್ನು ತಮ್ಮ ಅಗತ್ಯಗಳಿಗೆ ಬಳಸುವಂತಾಯಿತು. ಈ ಸಾಮಾಜಿಕ ಬ್ಯಾಂಕಿಂಗ್ ಪ್ರಕ್ರಿಯೆಯ ಭರಾಟೆಯಲ್ಲಿ ಬ್ಯಾಂಕಿಂಗಿನ ಮತ್ತೊಂದು ಗಮನಾರ್ಹ ಅಂಶವಾದ ಲಾಭಪ್ರದತೆಗೆ ಕಡಿಮೆ ಮಹತ್ವ ದೊರಕಿತು. ಇದರೊಂದಿಗೆ ಬ್ಯಾಂಕುಗಳು ಸಾಮಾಜಿಕ ಅಗತ್ಯಗಳಿಗೆ ಪ್ರತಿಸ್ಪಂದಿಸುವ ಹಲವಾರು ಯೋಜನೆಗಳನ್ನು ಕೈಗೆತ್ತಿಕೊಳ್ಳಬೇಕಾಯಿತು. ರಾಷ್ಟ್ರೀಕರಣದ ಮತ್ತೊಂದು ಗಮನಾರ್ಹ ಬೆಳವಣಿಗೆಯೆಂದರೆ ಸಮಾಜದ ಪ್ರತಿ ವರ್ಗದ ಜನರು ಬ್ಯಾಂಕುಗಳಿಂದ ಹೆಚ್ಚು ಹೆಚ್ಚು ಅಪೇಕ್ಷಿಸುವ ಪ್ರವೃತ್ತಿ ಬೆಳೆದಿದ್ದು. ಠೇವಣಿದಾರ ಗ್ರಾಹಕ ಕಡಿಮೆ ಶುಲ್ಕದಲ್ಲಿ ದಕ್ಷ ಸೇವೆ ಬಯಸಿದರೆ, ಸಣ್ಣ ರೈತ, ಕುಶಲಕರ್ಮಿ, ಸಕಾಲದಲ್ಲಿ ಧನಪೋಷಣೆಯ ಸಹಾಯ ಬಯಸಿದ. ಸಣ್ಣ ವ್ಯಾಪಾರಿ ಉದ್ಯಮಿಗಳೂ ಬ್ಯಾಂಕಿನಿಂದ ವ್ಯಾಪಕ ನೆರವು ಬಯಸಿದರು. ಬೃಹತ್ ಉದ್ಯಮಿಗಳಂತೂ ಸರಿಯೇ ಸರಿ. ತಮ್ಮ ಅಗತ್ಯಗಳಿಗೆ ಸ್ಪಂದಿಸಲು ರಾಷ್ಟ್ರೀಕೃತ ಬ್ಯಾಂಕ್ ಜಾಲಕ್ಕೆ ಸಾಧ್ಯವಾಗದೆನ್ನುವ ಮಟ್ಟಿಗೆ ಅವರ ನಿರೀಕ್ಷೆ ಏರಿತು. ಒಂದೆಡೆ ಸಾಮಾಜಿಕ ಬ್ಯಾಂಕಿಂಗ್ ಭರಾಟೆಗೆ ಸಿಕ್ಕಿ ಲಾಭಪ್ರದತೆಯ ಕುಸಿತ, ಮತ್ತೊಂದೆಡೆ ಹೆಚ್ಚಿದ ನಿರೀಕ್ಷೆಗಳು, ಸಾಲದೆಂಬಂತೆ ದಿನದಿನಕ್ಕೆ ಬದಲಾದ ಸರ್ಕಾರದ ನೀತಿಗಳು ಇವುಗಳಿಂದ ರಾಷ್ಟ್ರೀಕೃತ ಬ್ಯಾಂಕ್ ವರ್ಗ ಬಳಲಿತು.

ಇದೇ ವೇಳೆ ಖಾಸಗೀಕರಣದ ಗಾಳಿ ಪ್ರಬಲಗೊಂಡು, ಐಸಿಐಸಿಐ

ಬ್ಯಾಂಕ್, ಎಚ್‌ಡಿಎಫ್‌ಸಿ ಬ್ಯಾಂಕ್, ಯುಟಿಐ ಬ್ಯಾಂಕ್‌ನಂಥ ಖಾಸಗಿ ಸ್ವಾಮ್ಯದ ಬ್ಯಾಂಕುಗಳು ಪ್ರವೇಶ ಪಡೆದವು. ಅಭಿವೃದ್ಧಿ ಬ್ಯಾಂಕಿಂಗ್ ಮತ್ತು ವಿನಿಯೋಜನ ಬ್ಯಾಂಕಿಂಗ್ ಸಂಸ್ಥೆಗಳು ಬ್ಯಾಂಕುಗಳನ್ನು ಪ್ರವರ್ತಿಸಿವೆ ಎಂಬುದು ಗಮನಾರ್ಹವಾದ ವಿಷಯ. ಹಾಗಾದರೆ ಈ ಬ್ಯಾಂಕುಗಳು ರಾಷ್ಟ್ರೀಕೃತ/ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಪ್ರತಿಸ್ಪರ್ಧಿಗಳೆ ? ಈ ಖಾಸಗಿ ಬ್ಯಾಂಕುಗಳಿಂದ ಹಾಲೀ ರಾಷ್ಟ್ರೀಕೃತ ಬ್ಯಾಂಕುಗಳ ಭವಿಷ್ಯವೇನು ? ಎಂಬುದನ್ನು ಚರ್ಚಿಸುವುದು ಯುಕ್ತ.

### ಖಾಸಗಿ ಬ್ಯಾಂಕ್—ಅನುಕೂಲಗಳು

1 ಖಾಸಗಿ ಬ್ಯಾಂಕ್‌ಗಳು ಬೃಹತ್ ಉದ್ಯಮಿಗಳಿಗೆ ಒಂದು ವರ. ಅಲ್ಲಿ ನೌಕರಶಾಹಿಯ ವ್ಯಾಪ್ತಿ ಬಹಳ ಮಿತವಾದುದರಿಂದ ದೊಡ್ಡ ಸಾಲ ಪ್ರಸ್ತಾಪ, ಸೇವಾ ಶುಲ್ಕ ಪ್ರಮಾಣ ಮುಂತಾದುವುಗಳ ಬಗ್ಗೆ ಶೀಘ್ರ ನಿರ್ಧಾರ ತೆಗೆದುಕೊಳ್ಳುವುದು ಸಾಧ್ಯ. ಆದರೆ ರಾಷ್ಟ್ರೀಕೃತ ಬ್ಯಾಂಕುಗಳ ಬಹುಶ್ರೇಣಿ ಅಧಿಕಾರ ವ್ಯವಸ್ಥೆಯಲ್ಲಿ ನಿರ್ಧಾರಗಳು ಮೇಲ್‌ಸ್ತರದಿಂದ ಕಾರ್ಯಾಚರಣೆ ಸ್ತರಕ್ಕೆ ಬರಲು ಸಾಕಷ್ಟು ಕಾಲ ವ್ಯಯವಾಗಬಹುದು.

2 ಖಾಸಗಿ ಬ್ಯಾಂಕುಗಳು ಸ್ವಯಂಚಲೀಕರಣ ವ್ಯವಸ್ಥೆ ಹೊಂದಿ ಗ್ರಾಹಕರಿಗೆ ದಕ್ಷ ಹಾಗೂ ದೋಷ ರಹಿತ ಸೇವೆ ನೀಡುವ ಮೂಲ ಸೌಲಭ್ಯ ಹೊಂದಿವೆ. ಆದರೆ ರಾಷ್ಟ್ರೀಕೃತ ಬ್ಯಾಂಕುಗಳು ಈ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿ ನಗಣ್ಯ. ಈ ಅನುಕೂಲಗಳು ಕಾರ್ಪೊರೇಟ್ ಗ್ರಾಹಕರನ್ನು ಖಾಸಗಿ ಬ್ಯಾಂಕುಗಳತ್ತ ಒಲಿಯುವಂತೆ ಮಾಡಿವೆ.

### ಸಾರ್ವಜನಿಕ ವಲಯ ಬ್ಯಾಂಕುಗಳು

ಈ ಅನುಕೂಲಗಳು ಖಾಸಗಿ ಬ್ಯಾಂಕುಗಳ ವಾದವನ್ನು ಎತ್ತಿ ಹಿಡಿಯುತ್ತವೆಯಾದರೂ, ಅವು ರಾಷ್ಟ್ರೀಕೃತ/ಸಾರ್ವಜನಿಕ ವಲಯ ಬ್ಯಾಂಕುಗಳ ಜತೆ ಎಲ್ಲ ಸ್ತರಗಳಲ್ಲೂ ಸ್ಪರ್ಧಿಸಲಾರವು. ರಾಷ್ಟ್ರೀಕೃತ/ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಇರುವ ಧನಾತ್ಮಕ ಅನುಕೂಲಗಳೆಂದರೆ :

1 ಈ ವಾಣಿಜ್ಯ ಬ್ಯಾಂಕುಗಳು ದೇಶದ ಉದ್ದಗಲಕ್ಕೂ ವ್ಯಾಪಿಸಿರುವ ಶಾಖಾಜಾಲವನ್ನು ಹೊಂದಿವೆ. ಯಾವುದೇ ನಿಧಿ ವರ್ಗಾವಣೆ—ಅಂದರೆ ತಂತಿ ವರ್ಗಾವಣೆ, ಅಂಚೆ ವರ್ಗಾವಣೆ, ಡ್ರಾಫ್ಟ್ ಮುಂತಾದವು—ಬಯಸುವ ಪ್ರತಿಗ್ರಾಹಕ ಈ ಸೌಲಭ್ಯಕ್ಕಾಗಿ ವಿಸ್ತೃತ ಶಾಖಾಜಾಲ ಹೊಂದಿರುವ ರಾಷ್ಟ್ರೀಕೃತ ಬ್ಯಾಂಕುಗಳನ್ನೇ ಆಶ್ರಯಿಸಬೇಕಾಗಿದೆ. ಖಾಸಗಿ ಸ್ವಾಮ್ಯದ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕ್ ಶಾಖಾಜಾಲದ ಮೂಲಕ ರವಾನೆ ಸೌಲಭ್ಯಕ್ಕೆ ಪ್ರಯತ್ನಿಸುತ್ತಿವೆಯಾದರೂ, ಈ ನಿಟ್ಟಿನಲ್ಲಿ ಸರ್ಕಾರಿ ಬ್ಯಾಂಕುಗಳಿಗೆ ಇರುವ ಸ್ವಾಭಾವಿಕ ಅನುಕೂಲ ಅವಕ್ಕಿಲ್ಲ.

2 ಇತ್ತೀಚೆಗೆ ಆರಂಭವಾಗಿರುವ ಖಾಸಗಿ ಬ್ಯಾಂಕುಗಳು ಬಹುತೇಕ ಕಾರ್ಪೊರೇಟ್ ವಲಯದ ಬೃಹತ್ ಗ್ರಾಹಕರನ್ನು ಕೇಂದ್ರ ಗಮನ ಹೊಂದಿ ರಚಿತವಾದವು. ಸರ್ಕಾರಿ ಬ್ಯಾಂಕುಗಳ ಗ್ರಾಹಕ ವೈವಿಧ್ಯವನ್ನಾಗಲೀ ವಿಸ್ತಾರವನ್ನಾಗಲೀ ಅದು ಹೊಂದುವುದು ದೂರದ ಮಾತು. ಸಣ್ಣ ಪಿಂಚಣಿದಾರ, ಗೃಹಿಣಿಯರು, ರೈತ, ಕುಶಲಕರ್ಮಿ, ಸಂಬಳ ಪಡೆಯುವ ವರ್ಗ, ಸಣ್ಣ ವ್ಯಾಪಾರಿಗಳಿಂದ ಹಿಡಿದು ಬೃಹತ್ ಕಂಪನಿಗಳವರೆಗೆ ಎಲ್ಲರೂ ಈ ಬ್ಯಾಂಕುಗಳನ್ನೇ ಅವಲಂಬಿಸಿದ್ದಾರೆ. ರಾಷ್ಟ್ರೀಕರಣವಾದ ನಂತರದಲ್ಲಿ ಗ್ರಾಮೀಣ ಜನ ಬ್ಯಾಂಕುಗಳತ್ತ ನೋಡುವುದು ಅಧಿಕವಾಗಿದೆ. ಇಂದು ತಾಲ್ಲೂಕು ಕಚೇರಿ, ಸರ್ಕಾರಿ ಕಛೇರಿಗಳಿಗೆ ಹೋಗುವುದಕ್ಕಿಂತ ಹೆಚ್ಚಾಗಿ ಬ್ಯಾಂಕುಗಳಿಗೆ ಆ ಜನ ಬರುತ್ತಿದ್ದಾರೆ. ಈ ಒಂದು ನಿಟ್ಟಿನಲ್ಲಿ ಖಾಸಗಿ ಸ್ವಾಮ್ಯದ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸ್ಪರ್ಧೆ ನೀಡಲು ಸಾಧ್ಯವಿಲ್ಲ.

3 ಠೇವಣಿ ಸ್ವೀಕಾರ, ಸಾಲನೀಡಿಕೆ ಈ ಮೂಲಭೂತ ಕಾರ್ಯದ ಜತೆ ಇನ್ನೂ ಹಲವಾರು ಸಹಾಯಕ ಹಾಗೂ ಅಭಿಕರ್ತ ಸೇವೆಗಳನ್ನು ರಾಷ್ಟ್ರೀಕೃತ ಬ್ಯಾಂಕುಗಳು ನೀಡುತ್ತವೆ. ಭದ್ರತಾ ಕಪಾಟು ನೀಡಿಕೆ, ಷೇರುಹಣ ಸ್ವೀಕಾರ, ವಣಿಕ ಬ್ಯಾಂಕಿಂಗ್, ಷೇರುಗಳ ಅಭಿಗೋಪನ, ಸ್ಥಾಯೀ ಆದೇಶಪಾಲನೆ ಇತ್ಯಾದಿ ಸಮಾಜದ ಎಲ್ಲ ವರ್ಗಗಳಿಗೂ ಈ ನಿಟ್ಟಿನಲ್ಲಿ ಸೇವೆ ದೊರೆಯುತ್ತಿದ್ದು, ಇದು ಮುಂದೆಯೂ ರಾಷ್ಟ್ರೀಕೃತ ಬ್ಯಾಂಕುಗಳ ಏಕಸ್ವಾಮ್ಯವಾಗೇ ಉಳಿಯಲಿದೆ.

ಹೀಗೆ ಖಾಸಗಿ ಬ್ಯಾಂಕುಗಳು ಬ್ಯಾಂಕಿಂಗ್ ರಂಗ ಪ್ರವೇಶಿಸಿದ್ದಾಗ್ಯೂ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇನ್ನೂ ಅವಕಾಶವಿದೆ. ಗ್ರಾಹಕರ ಆಕಾಂಕ್ಷೆ ಅಭಿಲಾಷೆಗಳ ಎತ್ತರಕ್ಕೆ ಏರಲು ರಾಷ್ಟ್ರೀಕೃತ ಬ್ಯಾಂಕುಗಳು ಪ್ರಯತ್ನಿಸುವುದು ಅವುಗಳ ಉಳಿವಿಗೆ ಅಗತ್ಯವಾಗಿದೆ. ಖಾಸಗಿ ವಲಯ ಬ್ಯಾಂಕುಗಳ ಅಸ್ತಿತ್ವವನ್ನು ಒಂದು ಸವಾಲಾಗಿ ಪರಿಗಣಿಸಿ ರಾಷ್ಟ್ರೀಕೃತ ಬ್ಯಾಂಕುಗಳು ಪುನರ್‌ರಚನೆ ಸುಧಾರಣೆಗಳತ್ತ ಗಮನಹರಿಸಿ, ಅಭಿವೃದ್ಧಿ ಹೊಂದುವುವೇ ಎಂಬುದನ್ನು ಕಾದು ನೋಡಬೇಕಾಗಿದೆ. ●

# ಇಂದಿನ ಬ್ಯಾಂಕ್ ಉದ್ಯೋಗಿ ಸಂತುಷ್ಟನೆ?

**ಎಸ್. ಎನ್. ಬಾಲಸರಸ್ವತಿ**

ಭಾರತೀಯ ಸ್ಟೇಟ್ ಬ್ಯಾಂಕ್, ಬಸವನಗುಡಿ ಶಾಖೆ

ಸಾಮಾಜಿಕ ಬ್ಯಾಂಕಿಂಗ್ ಲಾಭದೃಷ್ಟಿಯ ಬ್ಯಾಂಕಿಂಗಿಗಿಂತ ವಿಭಿನ್ನವಾದದ್ದು; ಎರಡೂ ಬ್ಯಾಂಕಿಂಗಿನ ಆವಶ್ಯಕ ಮುಖಗಳು—ಎಂಬುದನ್ನು ಅರ್ಥಮಾಡಿಕೊಂಡು, ವ್ಯವಸ್ಥೆಯ ಹಂತದಿಂದ ಬದಲಾವಣೆ ಆರಂಭಿಸಿ, ಎರಡು ವಿಭಿನ್ನ ಅರ್ಥೋರಚನೆಗಳ ನಿರ್ಮಾಣ ಮಾಡಿದಲ್ಲಿ ತೃಪ್ತಿಕರ ಬೆಳವಣಿಗೆಯನ್ನೂ ನೋಡಬಹುದು, ಸಂತುಷ್ಟ ಉದ್ಯೋಗಿಗಳನ್ನೂ ಕಾಣಬಹುದು —ಎನ್ನುತ್ತಾರೆ ಲೇಖಕಿ.

ಹೊರಗಿನ ಸಹಾನುಭೂತಿ, ಒಳಗಿನ ಪ್ರೀತಿ,
ಅಧೀನತೆ, ಸ್ವಾಯತ್ತತೆ ಯಾವುದೂ ಇಲ್ಲ ಪೂರ್ತಿ.
ಎಲ್ಲಿಯೂ ಸಲ್ಲದ ನಿನ್ನ ರೀತಿ, ಬ್ಯಾಂಕ್ ಉದ್ಯೋಗಿ,
ಯಾವ ದೇವರಿಗೋ ಪ್ರೀತಿ !

ಇಂದಿನ ಬ್ಯಾಂಕ್ ಉದ್ಯೋಗಿಯ ಒಂದು ಚಿತ್ರಣ ಇದು. ಸಾರ್ವಜನಿಕರ ಕೆಂಗಣ್ಣು ಎದುರಿಸುತ್ತಾ, ಆಂತರಿಕ ಸ್ಪರ್ಧೆ ಒಳಜಗಳಗಳನ್ನು ನುಂಗುತ್ತಾ, ಸ್ವತಂತ್ರನೂ ಅಲ್ಲದೆ, ಪರತಂತ್ರವೂ ಇಲ್ಲದೆ ತ್ರಿಶಂಕುವಿನಂತೆ ನರಳುತ್ತಿದ್ದಾನೆ ಈತ.

ನಮ್ಮ ದೇಶದಲ್ಲಿ ಬ್ಯಾಂಕಿಂಗ್ ಒಂದು ವಿಶಿಷ್ಟ ಇತಿಹಾಸವನ್ನು ಹೊಂದಿದೆ. ವಾಣಿಜ್ಯೋದ್ಯಮದ ಅಭಿವೃದ್ಧಿ ಅದರ ಒಂದು ಮುಖವಾದರೆ, ತೀರ ಕೆಳಸ್ತರದ ವ್ಯಕ್ತಿಯನ್ನೂ, ಅಂದರೆ ಆರ್ಥಿಕವಾಗಿ ಬಡತನದ ರೇಖೆಯನ್ನು ಮುಟ್ಟುವ ಮತ್ತು ಅದಕ್ಕಿಂತಲೂ ಕೆಳಗಿನ ಹಂತದಲ್ಲಿ ಜೀವನ ನಡೆಸುವ ವ್ಯಕ್ತಿಯನ್ನೂ ತಲುಪುವ ಹಂಚಿಕೆ ಬ್ಯಾಂಕಿಂಗಿನ ಇನ್ನೊಂದು ಮುಖವಾಗಿದೆ. ರೈತಪ್ರಧಾನವಾದ ನಮ್ಮ ವ್ಯವಸ್ಥೆಯಲ್ಲಿ ಆರ್ಥಿಕ ವ್ಯವಸ್ಥೆಯ, ಸುವ್ಯವಸ್ಥೆಯ ಅನುಭೂತಿಯನ್ನು, ಅದರ ಬಗ್ಗೆ ಒಂದು ಪ್ರಜ್ಞೆಯನ್ನು ಮೂಡಿಸುವ ಹಂತದಲ್ಲಿಯೂ ಸಹ ಬ್ಯಾಂಕಿಂಗ್ ಪ್ರಧಾನ ಪಾತ್ರ ನಿರ್ವಹಿಸುತ್ತಾ ಬಂದಿದೆ. ಬ್ಯಾಂಕಿನ ರಾಷ್ಟ್ರೀಕರಣದಿಂದ ಈ ಉದ್ದೇಶ ಇನ್ನೂ ಬಲವಾಗಿ, ಇನ್ನೂ ಹೆಚ್ಚಿನ ಒತ್ತಾಯ ವ್ಯಕ್ತಪಡಿಸುತ್ತಾ, ಇನ್ನೂ ಕಾಳಜಿ ತೋರಿಸುತ್ತಾ, ಬಡ ಜನತೆಯತ್ತ ಹೆಚ್ಚಿನ ಒಲವು ತೋರುತ್ತಾ ಬಂದಿದೆ.

ಬ್ಯಾಂಕು ದೇಶದ ಆರ್ಥಿಕ ವ್ಯವಸ್ಥೆಯ ನಿರ್ವಹಣೆಯಲ್ಲಿ ವೈದ್ಯನಾಗಿ ವರ್ತಿಸುತ್ತಿದೆ. ಬೇರೆ ರೋಗ ಚಿಕಿತ್ಸೆಯಲ್ಲಿ ಹೇಗೆಯೋ, ಹಾಗೆಯೇ ಇಲ್ಲಿಯೂ ಜಾಗರೂಕತೆ, ರೋಗದ ಬಗ್ಗೆ ಸಂಪೂರ್ಣ ಮಾಹಿತಿ, ಚಿಕಿತ್ಸೆಗೆ ಬೇಕಾದ ಸನ್ನದ್ಧತೆ ಮತ್ತು ಸೇವಾ ಮನೋಭಾವಗಳು ಇಲ್ಲಿ ಕೂಡ ಆವಶ್ಯಕ. ಸಂಪತ್ತಿನ ಹಂಚಿಕೆ, ಹಳ್ಳಿಗಳಿಗೆ ಬ್ಯಾಂಕಿಂಗ್ ಸೌಲಭ್ಯದ ಪ್ರಾಪ್ತಿ ಮುಖ್ಯ ಉದ್ದೇಶವಾಗಿ ಪ್ರಾರಂಭವಾದ ಸಾಂಪ್ರದಾಯಿಕ ಬ್ಯಾಂಕಿಂಗ್ ವಿಕಾಸದ ಹಾದಿಯಲ್ಲಿ ಸಾಕಷ್ಟು ಮುನ್ನಡೆದು ಇಂದು ಉತ್ತುಂಗದಲ್ಲಿ ನಿಂತು, ಮತ್ತೊಂದು ಹಾದಿಯಲ್ಲಿ ಹೆಜ್ಜೆಯಿಡುವ ಆಲೋಚನೆ ಮಾಡುತ್ತಿದೆ. ರಾಷ್ಟ್ರೀಕರಣದ ಸಮಯದಲ್ಲಿ ಮತ್ತು ಪ್ರಸಕ್ತ ಸನ್ನಿವೇಶದಲ್ಲಿ ಬ್ಯಾಂಕಿಂಗ್ ಎಂದು ಅರ್ಥೈಸಿದರೂ ಸಾಕು, ಅಂದು–ಇಂದಿನ ವ್ಯತ್ಯಾಸ ಸ್ಪಷ್ಟವಾಗುತ್ತದೆ.

ಅಂದು 'ಲಾಭಪ್ರದತೆ' ಮುಖ್ಯವಾಗದೆ, 'ಬೆಳವಣಿಗೆ' ಅಭಿವೃದ್ಧಿ ಮುಖ್ಯ ಉದ್ದೇಶವಾಗಿದ್ದು, ಸೇವಾ ಮನೋಭಾವ, ಪರಿಶ್ರಮ' ತಾಳ್ಮೆ ಇವುಗಳಿಗೆ ಒತ್ತು ಹೆಚ್ಚಾಗಿತ್ತು. 'ಕಾಯಕವೇ ಕೈಲಾಸ, ವಾಗಿದ್ದ ಅಂದಿನ ಮನಃಪ್ರವೃತ್ತಿಗೆ, ಯಾವ ಕೃತಕ ಪರಿಧಿಗೂ ಸಿಲುಕದ ಕೆಲಸ ತೃಪ್ತಿ ನೀಡುತ್ತಿತ್ತು. ಆದರೆ ಇಂದು, ಬದಲಾಯಿಸಿದ ಸಾಮಾಜಿಕ ಪರಿವೇಶದಲ್ಲಿ, ಬ್ಯಾಂಕ್ ಉದ್ಯೋಗಿಯೂ ಸಹ ಚದುರಂಗದ ಕಾಯಿಯಂತೆ ಹೊರಒತ್ತಡಗಳಿಗೆ ಪಕ್ಕಾಗಿದ್ದಾನೆ. ಜೊತೆಗೇ 'ತನ್ನತನ'ವೊಂದನ್ನು ಗುರುತಿಸಿಕೊಂಡ ಬ್ಯಾಂಕ್ ಉದ್ಯೋಗಿಗೆ, ಸಂಪೂರ್ಣ ತಾದಾತ್ಮ್ಯ ಹೊಂದುವುದು ಕಷ್ಟಕರ, ಇದರಿಂದ ಮನಸ್ತೃಪ್ತಿ ಹೊಂದುವುದೂ ದೂರದ ಮಾತು.

## ಉದಾಸೀನ, ನಿರಾಶೆ

ಇಂದು ಪ್ರತಿ ಹಂತದಲ್ಲಿಯೂ, ನೌಕರನಾಗಲಿ, ಇಲ್ಲವೇ ಮೇಲಧಿಕಾರಿಯಾಗಲಿ, ತನಗಿಂತ ಮೇಲಿನ ಅಧಿಕಾರಿಯ ಹಸ್ತಕ್ಷೇಪ ಅನಿವಾರ್ಯವಾಗುವ ವ್ಯವಸ್ಥಾಪನೆಯ ತೊಡಕು ಉಂಟಾಗಿ ಕೆಲಸದಲ್ಲಿ ಔದಾಸೀನ್ಯ ನಿಧಾನವಾಗಿ ಬೆಳೆಯುತ್ತಾ ಬಂದಿದೆ. ಬದಲಾಗುತ್ತಿರುವ ಆರ್ಥಿಕ ಪ್ರಣಾಲಿಗಳು, ವಿದೇಶೀ ಬ್ಯಾಂಕುಗಳೊಟ್ಟಿಗೆ ಪೈಪೋಟಿ, ಸಾಮಾನ್ಯ ಮನುಷ್ಯನ, ತನ್ಮೂಲಕ ಸಮೂಹದ ಬೆಳವಣಿಗೆಯತ್ತ ಗಮನವಿಟ್ಟಿದ್ದ ಬ್ಯಾಂಕಿಂಗನ್ನು ಅಂತರದೇಶೀಯ ಕಾರ್ಯವ್ಯಾಪನೆಯತ್ತ ಒಯ್ಯುತ್ತಿವೆ. ಅದಕ್ಕೆ ಉಚಿತವಾದ

ಬದಲಾವಣೆ, ಕಾರ್ಯನೀತಿ ಹಾಗೂ ವ್ಯವಸ್ಥಾಪನೆ ಎರಡೂ ರಂಗಗಳಲ್ಲಿ ಅವಶ್ಯಕ. ಈ ಬದಲಾವಣೆಯ ತೊಳಲಾಟದಲ್ಲಿ ಸಿಲುಕಿರುವ ಬ್ಯಾಂಕ್ ಉದ್ಯೋಗಿ ತನ್ನ ಗುರಿಯನ್ನು ಸ್ಪಷ್ಟವಾಗಿ ಗುರುತಿಸುವ ತೊಳಲಾಟದಲ್ಲಿ ಕಳೆದುಹೋಗಿದ್ದಾನೆ. ಅಂದು, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಬೇಕುಗಳು ಬಹು ಕಡಿಮೆ. ಇಂದಿನ ಬೇಕುಗಳು ಸೀಮಾರಹಿತ. ಸರಣಿಯಲ್ಲಿ ಧುತ್ತೆಂದು ಬಂದು ನಿಲ್ಲುವ ಇವುಗಳ ಪೂರೈಕೆ ಅಸಾಧ್ಯವಾಗಿದೆ ಎಂಬುದು ಬ್ಯಾಂಕು ಉದ್ಯೋಗಿಗೆ ಮಾತ್ರ ಸೀಮಿತವಾದಂತಹ ಸಮಸ್ಯೆಯಲ್ಲ. ದೇಶಾದ್ಯಂತ ವ್ಯಾಪಕವಾದ ರಾಷ್ಟ್ರೀಯ ಸಮಸ್ಯೆ ಎಂದರೆ ಉತ್ಪ್ರೇಕ್ಷೆಯಲ್ಲ. ಕಡಿಮೆ ಸವಲತ್ತುಗಳನ್ನು ಪಡೆದು ಹೆಚ್ಚು ಕೆಲಸ ಮಾಡುತ್ತಿದ್ದ ಅಂದಿನ ಬ್ಯಾಂಕು ಉದ್ಯೋಗಿ ಕಾರ್ಯತೃಪ್ತಿಹೊಂದುತ್ತಿದ್ದ. ಅಂದು 'ಉದ್ಯೋಗವೇ ಜೀವನ'ವಾಗಿತ್ತು. ಆದರೆ ಇಂದು 'ಜೀವನಕ್ಕಾಗಿ ಉದ್ಯೋಗ'. ತನ್ನ ಜೀವನದ ವ್ಯಾಪ್ತಿಯನ್ನು ಉದ್ಯೋಗದಿಂದಾಚೆಯೂ ಗುರುತಿಸುವ ಬ್ಯಾಂಕು ಉದ್ಯೋಗಿ ಉದ್ಯೋಗಾವಧಿಯಲ್ಲಿ ನಡೆಸುವ ಕಾರ್ಯಗಳಿಂದ ತೃಪ್ತಿ ಹೊಂದುವುದಿಲ್ಲ. ತನ್ನ ಆಸಕ್ತಿ, ಅಭಿರುಚಿ, ಅರ್ಹತೆಗಳಿಗೆ ತಕ್ಕಂತಹ ಉದ್ಯೋಗ ಸಿಗದಿದ್ದಾಗ ಉಂಟಾಗುವ ಅತೃಪ್ತಿ ಅವನ ಪ್ರತಿ ಹೆಜ್ಜೆಯಲ್ಲೂ ವ್ಯಕ್ತವಾಗುತ್ತದೆ. ತೀರ ಸಾಮಾನ್ಯ ಆವಶ್ಯಕತೆಗಳ ಪೂರೈಕೆಗಾಗಿಯೂ ಸಮಯ, ಶ್ರಮಗಳ ವ್ಯಯ ಆಗುವಾಗ ಆಸಕ್ತಿ ಪೂರೈಸುವ ಇತರ ಚಟುವಟಿಕೆಗಳಿಗಾಗಿ ಸಮಯಾಭಾವ ಉಂಟಾಗಿ ಮಾಡುವ ಉದ್ಯೋಗದಲ್ಲಿಯೂ ಅಸಮಾಧಾನ, ಕಿರಿಕಿರಿ ಅಭಿವ್ಯಕ್ತವಾಗುವುದು ಅನಿವಾರ್ಯವಾಗುತ್ತದೆ. ಬ್ಯಾಂಕ್ ಉದ್ಯೋಗಿಯೂ ಇದಕ್ಕೆ ಹೊರತಲ್ಲ. ವಿಜ್ಞಾನದಲ್ಲಿ, ಮನಃಶಾಸ್ತ್ರದಲ್ಲಿ, ಅಥವಾ ಭಾಷಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಗಳನ್ನು ಪಡೆದು, ತೀರ ಸಂಬಂಧವಿಲ್ಲದ ಉದ್ಯೋಗವನ್ನು ನಿರ್ವಹಿಸುವಾಗ ಅತೃಪ್ತಿ ನಿರಾಶಾಭಾವ ತಲೆದೋರುವುದು ಅಸಹಜವಲ್ಲ. ತನ್ನತನದ ಅರಿವು ಹೆಚ್ಚಾಗಿ, ಯಾವುದೇ ಕೆಲಸ ನಿರ್ವಹಿಸಿದರೂ ಸಂಪೂರ್ಣ ತಾದಾತ್ಮ್ಯ ಉಂಟಾಗುವುದಿಲ್ಲ. ಸಂಬಳಕ್ಕೆ ಮೋಸ ಮಾಡಬಾರದೆಂಬ ಹಿಂದಿನವರ ಮನೋಭಾವ ಇಲ್ಲವಾಗಿದೆ. ಮನಃಸ್ಥಿತಿಯ ಬದಲಾವಣೆ ಮತ್ತು ಧೋರಣೆಯ ಬದಲಾಣೆ ಮೊದಲು ವೈಯಕ್ತಿಕವಾಗಿ ನಂತರ ಎಲ್ಲ ರಂಗಗಳಲ್ಲಿಯೂ ವ್ಯಾಪಕವಾದ ಒಂದು ಆಂದೋಲನವಾಗಿ ಬರಬೇಕು.

## ಯಂತ್ರದೊಂದಿಗೆ ಯಂತ್ರ

ಬ್ಯಾಂಕ್‌ನಲ್ಲಿ ಉದ್ಯೋಗಿಯಾಗಿ ಹೆಜ್ಜೆಯಿಕ್ಕುತ್ತಿರುವಂತೆಯೇ, ತನ್ನ ವಿದ್ಯೆಗೆ, ಆಸಕ್ತಿಗಳಿಗೆ ತಕ್ಕುದಾದ ಉದ್ಯೋಗ ಇದಲ್ಲವೋ ಏನೋ ಎಂಬ ಸಂಶಯವೂ ಜೊತೆಗೆ ಕಾಲಿಡುತ್ತದೆ. ಉತ್ಸಾಹದಿಂದ ಕೆಲಸ ಮಾಡಬೇಕು ಎಂಬ ನಿರ್ಧಾರದಿಂದ ಆರಂಭಿಸುವಾಗ ಆಗುವ ಅನುಭವಗಳು ಮಾತ್ರ ಒಂದೇ ಬಗೆಯವು. ಮೊಟ್ಟಮೊದಲು ಜನ ಮೋಸ ಮಾಡಬಹುದು ಎಂಬ ಕಲ್ಪನೆಯಿಂದ



ಹೆಚ್ಚು ಎಚ್ಚರಿಕೆ ವಹಿಸುವ ಪ್ರಮೇಯ ಉತ್ಸಾಹಕ್ಕೆ ಕಡಿವಾಣ ಹಾಕುತ್ತದೆ. ಒಬ್ಬ ಉದ್ಯೋಗಿಯ ಕಾರ್ಯನಿರತೆಗೆ ಪೂರಕವಾದಂತಹ ಸಹಯೋಗ ಸಹೋದ್ಯೋಗಿಗಳಿಂದ ದೊರಕದೆ ಹೋದಾಗ ಉಂಟಾಗುವ ನಿರುತ್ಸಾಹ ಬೇರೂರಿಬಿಡುತ್ತದೆ. ಬ್ಯಾಂಕು ಉದ್ಯೋಗ ಮುಕ್ಕಾಲು ಪರಸ್ಪರ ಸಹಯೋಗದಲ್ಲಿಯೇ ನಿರ್ವಹಿಸಲ್ಪಡುವುದರಿಂದ ಯಾವೊಬ್ಬ ಉದ್ಯೋಗಿಯೂ ಪೂರ್ಣ ವ್ಯಕ್ತಿತ್ವದ ಉಪಯೋಗ ಮಾಡಿಕೊಳ್ಳುವುದರಲ್ಲಿ ಅಸಹಾಯನಾಗುತ್ತಾನೆ. ಇವೆರಡನ್ನೂ ಮೀರಿ ನಿಲ್ಲುವ ಮತ್ತೊಂದು ವಿಶಿಷ್ಟ ಕಿರುಕುಳವೆಂದರೆ ಮೇಲಧಿಕಾರಿಯ ಹಸ್ತಕ್ಷೇಪ. ಮೇಲಧಿಕಾರಿಯಾಗಲಿ ಗುಮಾಸ್ತೆಯಾಗಲಿ ತನಗಿಂತ ಮೇಲಿನವರ ಒಪ್ಪಿಗೆ ಇಲ್ಲದೆ, ಹಸ್ತಕ್ಷೇಪವಿಲ್ಲದೆ ಯಾವ ಗಮನಾರ್ಹ ಸಾಧನೆಯನ್ನೂ ಮಾಡಲು ಸಾಧ್ಯವಿಲ್ಲ. ಸ್ವತಃ ತನ್ನ ನಿರ್ಧಾರ ಉಚಿತ ಎನಿಸಿದರೂ ಸಹ ಮೇಲಧಿಕಾರಿ ಒಪ್ಪದಿದ್ದಲ್ಲಿ ಆ ನಿರ್ಧಾರ ಕಾರ್ಯಗತ ಮಾಡಲು ತನ್ನಿಂದ ಆಗದಾದಾಗ ಉಂಟಾಗುವ ಅಭಿಮಾನ ಹಾನಿ, ಬ್ಯಾಂಕು ಉದ್ಯೋಗಿಯ ಮನಸ್ಸಿನಲ್ಲಿ ನಿಧಾನವಾಗಿ ನಿರಾಶಾಭಾವದ, ಅಸಂತುಷ್ಟಿಯ ಮೂಲವಾಗುತ್ತದೆ. ಬಹಳ ವರ್ಷಗಳ ಕಾಲ ಬ್ಯಾಂಕ್‌ನಲ್ಲಿ ದುಡಿದಿರುವ ಉದ್ಯೋಗಿ ಈ ಮನೋಭಾವದ ಪ್ರತಿರೂಪವಾಗಿರುತ್ತಾನೆ. ಸರ್ಕಾರಿ ಹಾಗೂ ಇತರ ಪ್ರೈವೇಟು ಉದ್ಯೋಗಿಗಳಿಗಿಂತ ಬ್ಯಾಂಕು ಉದ್ಯೋಗಿ ಉತ್ತಮ ಸಂಬಳ ಮತ್ತು ಸವಲತ್ತುಗಳನ್ನು ಪಡೆದರೂ ಸಹ, ಬ್ಯಾಂಕ್ ಉದ್ಯೋಗಿಯಲ್ಲಿ ತುಷ್ಟಿ ಸಾಮಾನ್ಯವಾಗಿ ಕಂಡುಬರುವುದಿಲ್ಲ. ಪ್ರತಿ ಮೂರು, ನಾಲ್ಕು ವರ್ಷಗಳಿಗೊಮ್ಮೆ ಸಂಬಳದ ಬಡ್ತಿ ಕೇಳುವ ಬ್ಯಾಂಕು ಉದ್ಯೋಗಿ ಸಾರ್ವಜನಿಕರ ಕೆಂಗಣ್ಣಿಗೆ ತುತ್ತಾಗಿದ್ದಾನೆ. ಯಾರ ಸಹಾನುಭೂತಿ ಗಳಿಸದೆ, ಸಾರ್ವಜನಿಕರಲ್ಲಿ ಸದಭಿಪ್ರಾಯ ಮೂಡಿಸದೆ, ಕೆಲಸವನ್ನೇ ಮಾಡದೆ ಸಂಬಳ ಪಡೆಯುವ ಪುಣ್ಯವಂತ ಎಂಬ ಅಸೂಯಾಪರ ಅಸಹನೆಗೆ ಗುರಿಯಾದ ಬ್ಯಾಂಕು ಉದ್ಯೋಗಿ ವಾಸ್ತವವಾಗಿ ಅಷ್ಟು ಸುಖಿಯಲ್ಲ. ಕೇವಲ ಸಂಬಳ, ಸವಲತ್ತುಗಳೇ ತುಷ್ಟಿ ನೀಡುವಂತಿದ್ದಲ್ಲಿ, ತುಷ್ಟಿ ಒಂದು ತಪಸ್ಸಾಗುತ್ತಿರಲಿಲ್ಲ. ಮನುಷ್ಯನ ಆಂತರಿಕ ಹಂಬಲಗಳತ್ತ, ಆಕಾಂಕ್ಷೆಗಳತ್ತ ಗಮನ ನೀಡದ ಬ್ಯಾಂಕು ಉದ್ಯೋಗ ನೀರಸ ತರುವಿನಂತೆ, ಓದಿಗೆ ತಕ್ಕ ಜವಾಬ್ದಾರಿಯಿಲ್ಲದೆ, ಸಾಧನೆಗೆ ತಕ್ಕ ಬಡ್ತಿಯಿಲ್ಲದೆ ಸ್ಥಳದಿಂದ ಮತ್ತೊಂದಕ್ಕೆ ಅಲೆಮಾರಿ ಜೀವನದಲ್ಲಿ ಕಾಲೂರಿ, ಸಂಬಂಧಗಳನ್ನು ಬೆಳೆಸಿಕೊಳ್ಳಲು ಅವಕಾಶವೇ ಇಲ್ಲವಾಗಿದೆ. ಕೆಲವು ಬ್ಯಾಂಕುಗಳಲ್ಲಿ ಹಿರಿಯ ಅಧಿಕಾರಿಗಳನ್ನು ಒಳ್ಳೆದಾಗಿಸಿಕೊಳ್ಳದವರಿಗೆ ಬಡ್ತಿಯೇ ಸಿಗದ ಪ್ರಕರಣಗಳು ಹಲವಾರು. ಆತ್ಮಗೌರವ ಒತ್ತೆಗಿಟ್ಟು ಇನ್ನೊಬ್ಬರ ಮರ್ಜಿ ಕಾಯುವ ಸಂದರ್ಭಗಳೇ ಜಾಸ್ತಿ. ಅಧಿಕಾರಿ ವರ್ಗದವರಿಗಂತೂ ಮೂರು ವರ್ಷಗಳಿಗೊಮ್ಮೆ ಸ್ಥಳ ಬದಲಾವಣೆ, ಗಿಡವನ್ನು ಕಿತ್ತು ಕಿತ್ತು ಮರು ನೆಟ್ಟಂತೆ, ಮಕ್ಕಳ ಶಾಲೆ, ಮನೆ ಎಲ್ಲ ವ್ಯವಸ್ಥೆಗಳನ್ನೂ ಮಾಡಬೇಕಾಗಿ ಬಂದು ಕಿರಿಕಿರಿಯಾಗುತ್ತದೆ. ಬದಲಾವಣೆಯಲ್ಲಿ ತಾರತಮ್ಯ ಕಂಡುಬಂದಲ್ಲಿ ಅಥವಾ

ಸಮಾಧಾನಕರವಲ್ಲವಾದಲ್ಲಿ ಅಸಂತುಷ್ಟಿ ತಾನೇ ತಾನಾಗಿ ಪ್ರಕಟವಾಗು ತ್ತದೆ. ಸಮಾನ ಬಾಂಧವ್ಯವನ್ನು ಮೇಲಧಿಕಾರಿಗಳು ತೋರದೆ, ತಾರತಮ್ಯ ತೋರುವ ಬಗೆಯಿಂದ ಕೀಳರಿಮೆ, ಅಸಹನೆ ಎರಡೂ ಉಂಟಾಗುತ್ತದೆ. ಸ್ಥಳ ಬದಲಾವಣೆ ಇಲ್ಲದ ಗುಮಾಸ್ತೆ ಆದರೂ ಅಷ್ಟೆ. ಒಂದೇ ಮುಂಗಟ್ಟೆಯಲ್ಲಿ ಹೆಚ್ಚುಕಾಲ ಕೆಲಸ ಮಾಡು ವಂತಿಲ್ಲ. ಕೆಲಸವನ್ನು ಚೆನ್ನಾಗಿ ಅರಿತು, ಗ್ರಾಹಕರೊಂದಿಗೆ ಬಾಂಧವ್ಯ ಬೆಳೆಸುವ ಹೊತ್ತಿಗೆ, ತನ್ನ ಕೆಲಸದಲ್ಲಿ ತಾದಾತ್ಮ್ಯ ಹೊಂದಿ ಕೆಲಸವನ್ನು ಪ್ರೀತಿಸುವ ಹೊತ್ತಿಗೆ, ಕೆಲಸದ ಬದಲಾವಣೆ. ಒಂದು ಮಗುವನ್ನೂ ಸಹ ಸಾಕಿದರೆ ಪ್ರೀತಿ ಮೂಡುವಂತೆ ಮಾಡುವ ಕೆಲಸದಲ್ಲಿ ಪ್ರೀತಿ ಅರಸುವಂತಾಗಲು ಅವಕಾಶವೇ ಇರುವುದಿಲ್ಲ. ಗ್ರಾಹಕರ ಹೆಸರು ಅರಿಯುವ ವೇಳೆಗೆ ಬೇರೆ ಮುಂಗಟ್ಟಿಗೆ ಅಧಿಕಾರಿಗಳ ಬದಲಾವಣೆ, ಎಲ್ಲಿಯೂ ಮಾರ್ದವ ಬಾಂಧವ್ಯ ಮೂಡುವುದಕ್ಕೆ ಪೂರಕವಾಗಿಲ್ಲ. ಕೇವಲ ವ್ಯವಹಾರವೇ ಪ್ರಧಾನವಾದ ಯಾವುದೇ ಕೆಲಸವೂ ಎಂದೂ ಯಂತ್ರಕ್ಕೆ ತೃಪ್ತಿ ಕರವು ಹೊರತು ಮನುಷ್ಯನಿಗಲ್ಲ, ಭಾವನಾಶೂನ್ಯವಾದ ಗಣಕ ಮಾತ್ರವೇ ಪಕ್ಕಾ ಲೆಕ್ಕಗಳಿಗೆ ಪಕ್ಕಾ ಉತ್ತರ ನೀಡಬಲ್ಲುದು. ಬುದ್ಧಿಯಲ್ಲದೆ ಅಗೋಚರಭಾವ ಸಂವೇದನೆಗಳ ಲೂಟಿಯಾದ ಮನುಷ್ಯ ಆ ಹಸಿವಿಗೆ ತೃಪ್ತಿ ನೀಡಬಲ್ಲುದಾದ ಕೆಲಸ ಮಾಡಿದಲ್ಲಿ ಮಾತ್ರ ತುಷ್ಟನಾಗಬಲ್ಲ.

### ಎರಡು ಮುಖಗಳ ದರ್ಶನ

ಲಾಭಪ್ರದತೆ ಗುರಿಯಲ್ಲದ ಬ್ಯಾಂಕಿಂಗ್ ಸಮಾಜದ ಸಮಸ್ಯೆ ಗಳತ್ತ ನೇರ ಗಮನ ಹರಿಸಿ, ಆ ದಿಸೆಯಲ್ಲಿ ಉತ್ತರ ಹುಡುಕುವ, ಆ ಮೂಲೆಯಲ್ಲಿ ಹಸ್ತಪ್ರಕ್ಷೇಪ ಮಾಡುವತ್ತ, ಕಣ್ಣು ತೆಗೆಯ ಬೇಕು, ಇದರಿಂದ ಸಾರ್ವಜನಿಕ ಸಹಾನುಭೂತಿ ಸಿಕ್ಕೀತು. ನಮ್ಮ ಸಮುದಾಯ ಬ್ಯಾಂಕಿಂಗ್ ವಿಭಾಗಗಳು ಪೂರ್ಣ ಪರಿಚಾಲಿತವಲ್ಲ. ಒಂದೇ ವ್ಯಕ್ತಿ, ವ್ಯವಸ್ಥೆ ಮಾಡುವ, ಕೇವಲ 'ಇದೆ' ಎಂದು ತೋರಿಸಲು ಇರುವ ವಿಭಾಗಗಳಾಗಿವೆ. ಅದರ ಬದಲು, ಈ ವಿಭಾಗದಾಸರೆಯಲ್ಲಿ ಬ್ಯಾಂಕು ಉದ್ಯೋಗಿಗಳ ಸಂಘಟನೆ ಒಂದು ಕೊಳಚೆಪ್ರದೇಶ, ಒಂದು ಹಳ್ಳಿ ಅಥವಾ ಊರಿನ ಒಂದು ಕ್ಷೇತ್ರ ವನ್ನು 'ತನ್ನ'ದೆಂದು ಒಪ್ಪಿಕೊಂಡು, ಅದರ ಸಂಪೂರ್ಣ ಬೆಳವಣಿ ಗೆಯ ಜವಾಬ್ದಾರಿ ಹೊರಬೇಕು. ಇದು ನಿರಂತರ ಉದ್ಯೋಗ. ವರ್ಷಕ್ಕೊಮ್ಮೆ ಹಣ್ಣು ಹಂಚುವ, ಗಿಡ ನೆಡುವ ಚಟುವಟಿಕೆ ಯಾಗಿ ಇದರ ಪರಿಸಮಾಪ್ತಿಯಾಗಬಾರದು. ಇದರಿಂದ ಬ್ಯಾಂಕು ಉದ್ಯೋಗಿಗಳು ಕೂಪ ಮಂಡೂಕಗಳಾಗದೆ ಬೆಳೆಯುವ ಸಾಧ್ಯತೆ ಒಂದು ಗೆಲುವಾದರೆ, ಸಾರ್ವಜನಿಕರೊಡನೆ ನೇರ ಬೆರೆಯುವ ಸಾಧ್ಯತೆ ಇನ್ನೊಂದು. ನಮ್ಮ ಬಗ್ಗೆ ಇರುವ ಅಸಹನೆ, ತಿರಸ್ಕಾರ ಗಳನ್ನು ಅಳಿಸುವ ಅವಕಾಶ ಅಪೂರ್ವ.

ಇಂದು, ಸಾಮಾಜಿಕ, ಆರ್ಥಿಕ ರಾಜಕೀಯ ಸನ್ನಿವೇಶದಲ್ಲಿ ಆಗುತ್ತಿರುವ ಬದಲಾವಣೆಗಳಿಂದ ಎಲ್ಲರೂ ತೊಳಲಾಡುತ್ತಿದ್ದರೂ ಸಹ, ಮಹಿಳಾ ಉದ್ಯೋಗಿಗಳು ಕೆಲವು 'ಬೋನಸ್' ಒತ್ತಡಗಳಿಗೆ ಪಾತ್ರರು. ವಿಶೇಷ ವಿಸ್ತರಣೆಯ ಅಗತ್ಯವಿಲ್ಲ. 3-4 ಜವಾಬ್ದಾರಿ ಗಳನ್ನು ನಿರ್ವಹಿಸಿ ಬಳಲಿದರೂ, ಎಲ್ಲೆಡೆ ಪುರುಷ ಉದ್ಯೋಗಿ ಗಳ ಅಸಹನೆಗೆ ಗುರಿಯಾಗಿ ಸೋಲುವ ಮಹಿಳೆಗೆ ವಿಶೇಷ ಆಸರೆ ನೀಡಬೇಕು ಎಂಬುದು ನನ್ನ ಅಭಿಪ್ರಾಯ. ಸಹಕಾರಿ ಬ್ಯಾಂಕು ನೌಕರರ ಪರಿಸ್ಥಿತಿ ಮತ್ತೂ ಶೋಚನೀಯ. ಹೆಚ್ಚು ದುಡಿಮೆ, ಕಡಿಮೆ ಸವಲತ್ತುಗಳನ್ನು ಪಡೆಯುವ ಈ ಬ್ಯಾಂಕು ಉದ್ಯೋಗಿ ಗಳು ಅಸಂತುಷ್ಟರೇ ಆಗಿರಬೇಕು.

ಏನೇ ಆದರೂ, ತುಷ್ಟಿ ಮನಸ್ಸಿನ ಒಂದು ಅವಸ್ಥೆ, ಅದನ್ನು ಪಡೆದುಕೊಂಡಿರುವುದು ಕಷ್ಟಸಾಧ್ಯ. ಹೊರಗಣ ಅಂಶಗಳೂ ಪೂರಕವಾಗಿದ್ದು ಉಂಟುಮಾಡುವ 'ಸಮ್ಯಕ್' ತುಷ್ಟಿ ಸಂತುಷ್ಟಿ. ವೃತ್ತಿಪರತೆ, ಕಾರ್ಯನಿಷ್ಠೆಯ ಬಗ್ಗೆ ಅಜ್ಞಾನ, ಸಹಾನುಭೂತಿ ಇಲ್ಲದವರ ಒಡನಾಟ, ಜೊತೆಗೆ ಆಧುನಿಕ ಜೀವನೊಂದಿಗೆ ಬೆರೆತು ಹೋಗಿರುವ ಸಮಸ್ಯೆಗಳ ಸರಮಾಲೆ, ಇವು ಮನಸ್ಸು ತುಷ್ಟಿಯ ಅವಸ್ಥೆ ತಲುಪಲು ಅಡ್ಡವಾಗಿವೆ. ಬ್ಯಾಂಕ್ ಉದ್ಯೋಗಿಯಾಗಿ ತನ್ನ ಹೊಣೆ ಈಗ ಸೇವೆಯೇ, ಇಲ್ಲ ಲಾಭಪ್ರದತೆಯೇ ಎಂಬು ದನ್ನೂ ನಿಖರವಾಗಿ ಗುರುತಿಸಲಾಗದ ಹಂತದಲ್ಲಿ ಆತನಿದ್ದಾನೆ. ವಿದೇಶೀ ಬ್ಯಾಂಕುಗಳು ಒಡ್ಡುತ್ತಿರುವ ಸವಾಲನ್ನು ಎದುರಿಸಲು ಸಮಾನ ಸನ್ನದ್ಧತೆ ಇಲ್ಲದೆ ಬೆನ್ನು ತೋರುತ್ತಿದ್ದಾನೆ.

ಸಾಮಾಜಿಕ ಬ್ಯಾಂಕಿಂಗ್, ಲಾಭ ದೃಷ್ಟಿಯ ಬ್ಯಾಂಕಿಂಗಿಗಿಂತ ವಿಭಿನ್ನವಾದುದು ಮತ್ತು ಎರಡೂ ಬ್ಯಾಂಕಿಂಗಿನ ಆವಶ್ಯಕ ಮುಖ ಗಳು ಎಂಬುದನ್ನು ಅರ್ಥಮಾಡಿಕೊಂಡು, ವ್ಯವಸ್ಥೆಯ ಹಂತ ದಿಂದ ಬದಲಾವಣೆ ಆರಂಭಿಸಿ ಎರಡು ವಿಭಿನ್ನ ಅಧೋರಚನೆಗಳ ನಿರ್ಮಾಣ ಮಾಡಿದಲ್ಲಿ ತೃಪ್ತಿಕರ ಬೆಳವಣಿಗೆ, ತುಷ್ಟ ಉದ್ಯೋಗಿ —ಈರ್ವರನ್ನೂ ನೋಡಬಹುದು.

"ನೀನು ಹೊಳೆದರೆ ನಾನು ಹೊಳೆವೆ,
ನೀನು ಬೆಳೆದರೆ ನಾನು ಬೆಳೆವೆ..."

ಕವಿತೆಯೊಂದರ ತುಣುಕು ನೆನಪಿಗೆ ಬರುತ್ತಿದೆ. ●

---

### ಚಂದಾದಾರರಲ್ಲಿ

ನಿಮ್ಮ ವಿಳಾಸದಲ್ಲಿ ಬದಲಾವಣೆಯಾದಾಗ ದಯವಿಟ್ಟು ನಿಮ್ಮ ಹೊಸ ವಿಳಾಸವನ್ನು ನಮಗೆ ತಿಳಿಸಿ.

ಸಮನ್ವಯ ಸಮಿತಿ
ಭಾರತೀಯ ಸ್ಟೇಟ್ ಬ್ಯಾಂಕ್, ಕನ್ನಡ ಸಂಘಗಳು
೨೨ ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ೫೬೦ ೦೦೨

# ಬ್ಯಾಂಕುಗಳಲ್ಲಿ ದೂರುಗಳ ನಿರ್ವಹಣೆ ಮತ್ತು ತ್ವರಿತಕ್ರಮದ ಮಹತ್ವ

**ಎಚ್. ಆರ್. ವಿಜಯಲಕ್ಷ್ಮಿ**

ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮಂಡ್ಯ

ಗ್ರಾಹಕನನ್ನು ಬ್ಯಾಂಕ್ ಉದ್ಯೋಗಿಗಳು ಮನೆಗೆ ಬಂದ ಅತಿಥಿಯೆಂಬಂತೆ ಪರಿಗಣಿಸಿ ಸೇವಾ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ ಅದರಿಂದ ಬ್ಯಾಂಕಿಗೂ ಶ್ರೇಯಸ್ಸು, ಸರ್ವತ್ರ ಕ್ಷೇಮ ಸೌಹಾರ್ದ ಸಾಧನೆ.

ಬ್ಯಾಂಕಿಂಗ್ ಕ್ಷೇತ್ರದಲ್ಲಿ ಗ್ರಾಹಕರ ಸೇವೆಗೆ ಒಂದು ಮಹತ್ವಪೂರ್ಣ ಸ್ಥಾನವಿದೆ. ಬ್ಯಾಂಕುಗಳು ಹಣಕಾಸಿನ ವ್ಯವಹಾರದ ಕ್ಷೇತ್ರ ಮಾತ್ರವಾಗಿಲ್ಲ, ಸಾಮಾಜಿಕ ಸಂಬಂಧಗಳಿಗೂ ಬ್ಯಾಂಕುಗಳು ಹೊಣೆಯಾಗಿವೆ.

'ಗ್ರಾಹಕ' ಮತ್ತು 'ಬ್ಯಾಂಕರ್' ಶಬ್ದಗಳ ನಿರ್ದಿಷ್ಟ ಅರ್ಥ ವಿವರಣೆ ಕೊಡುವುದು ನಿಜಕ್ಕೂ ಕಷ್ಟಸಾಧ್ಯ. ಬ್ಯಾಂಕರನೆಂದರೆ ಹಣವನ್ನು ಠೇವಣಿ ರೂಪದಲ್ಲಿ ಸಂಗ್ರಹಿಸಿ, ಆವಶ್ಯಕತೆ ಇರುವವರಿಗೆ ಸಾಲ ರೂಪದಲ್ಲಿ ಬಡ್ಡಿಗೆ ಕೊಟ್ಟು ವ್ಯವಹರಿಸುವವನು ಎಂದು ಮೂಲಭೂತವಾಗಿ ತಿಳಿಯಬಹುದು. ಹಾಗೆಯೇ ಗ್ರಾಹಕನೆಂದರೆ ಬ್ಯಾಂಕಿನೊಂದಿಗೆ ಗುರುತಿಸುವಂತಹ ವ್ಯವಹಾರವನ್ನು ಇಟ್ಟು ಕೊಂಡಿರುವವನು, ಖಾತೆಗಳನ್ನು ತೆರೆದು ನಿತ್ಯ ವ್ಯವಹಾರವನ್ನು ನಡೆಸುವವನು, ಹೆಚ್ಚೆಂದರೆ ಬ್ಯಾಂಕಿನ ಸೌಲಭ್ಯಗಳನ್ನು ಗ್ರಹಿಸ ತಕ್ಕವನು ಎಂದು ಅರ್ಥೈಸಬಹುದು.

## ನಿರಂತರ ಅತೃಪ್ತ ಗ್ರಾಹಕ

ಗ್ರಾಹಕರ ಸೇವೆ ಬ್ಯಾಂಕಿನ ಒಂದು ಅವಿಭಾಜ್ಯ ಅಂಗವಾಗಿದೆ. ಎಲ್ಲಾ ಬ್ಯಾಂಕುಗಳಲ್ಲಿಯೂ ಒಂದೇ ರೀತಿಯ ಕೆಲಸಗಳಾದರೂ, ಅವನ್ನು ಗ್ರಾಹಕನಿಗೆ ತಲುಪಿಸುವಲ್ಲಿ ವ್ಯತ್ಯಾಸವಿರುವುದೇ ಬ್ಯಾಂಕುಗಳ ನಡುವಣ ಸ್ಪರ್ಧೆಗೆ ಕಾರಣ. ಬಡ್ಡಿದರಗಳೂ ಸೇವಾಶುಲ್ಕಗಳೂ ಎಲ್ಲಾ ಬ್ಯಾಂಕುಗಳಲ್ಲಿಯೂ ಒಂದೇ ತೆರನಾಗಿವೆ. ಗ್ರಾಹಕನನ್ನು ಆಕರ್ಷಿಸಲು ಅದರ ಸೇವೆಗಳು ಬಹುಮುಖವಾದವುಗಳು. ಠೇವಣಿ ಸಂಗ್ರಹಣೆ, ಠೇವಣಿ ಖಾತೆಗಳ ನಿರ್ವಹಣೆ, ಹಲವು ಯೋಜನೆಗಳ ಮೂಲಕ ಸಾಲ ವಿತರಣೆ—ಅಂದರೆ ಬಳಕೆದಾರರಿಗೆ, ವಿದ್ಯಾರ್ಥಿಗಳಿಗೆ, ಗೃಹ ನಿರ್ಮಾಣಕ್ಕೆ, ಗಣಕ ಹಾಗೂ ವಾಹನಗಳ ಖರೀದಿಗೆ, ಪಿಂಚಣಿದಾರರ ವೈದ್ಯಕೀಯ ನೆರವುಗಳಿಗೆ, ಹೀಗೆ ಅನೇಕ ರೀತಿಯವು. ಇದರೊಂದಿಗೆ ಹಣರವಾನೆ, ಸುರಕ್ಷಾ ಠೇವಣಿ ಕಪಾಟುಗಳ ನಿರ್ವಹಣೆ, ಸರಕಾರೀ ವ್ಯವಹಾರ, ತೀರುವಳಿ ಚೆಕ್ಕುಗಳ ಜಮಾ ನಿರ್ವಹಣೆ, ಪ್ರವಾಸಿ ಚೆಕ್ಕುಗಳು ಹಾಗೂ ಕೊಡುಗೆ ಚೆಕ್ಕುಗಳ ಸೌಲಭ್ಯ, ಉದರಿ ಪತ್ರಗಳ ವಿತರಣೆ ಹೀಗೆ ಹತ್ತಾರು ಯೋಜನೆಗಳಿಂದ ಗ್ರಾಹಕನಿಗೆ ಸೇವೆ ಸಲ್ಲಿಸುತ್ತಿದೆ. ಸೇವೆಯ ಮುಖಗಳು ಹೆಚ್ಚಾದಂತೆ, ಅವನ ಬೇಡಿಕೆಗಳೂ ಹೆಚ್ಚಾಗುತ್ತಿವೆ. ಗ್ರಾಹಕಎಂದೂ ಅತೃಪ್ತ. ಇಂದು ಒಬ್ಬನನ್ನು ಸಮಾಧಾನಗೊಳಿಸಿದರೆ ನಾಳೆ ಮತ್ತೊಬ್ಬನ ಬೇಡಿಕೆ ಮತ್ತೊಂದು ರೀತಿಯದಾಗಿರಬಹುದು. ಅವನ ದೂರುಗಳಿಂದ ದೂರವಿರಬೇಕಾದರೆ, ನಮಗೆ ಉಳಿದಿರುವ ಒಂದೇ ಮಾರ್ಗವೆಂದರೆ ಸಮರ್ಪಕ ಸೇವೆ. ಬ್ಯಾಂಕುಗಳು ತಮ್ಮ ದಿನನಿತ್ಯದ ಕೆಲಸಗಳಿಗೆ ತೃಪ್ತಿಗೊಳ್ಳದೆ, ಗ್ರಾಹಕನಿಗೆ ಹೊಸ ರೀತಿಯ ಸೇವಾ ಸೌಲಭ್ಯ ತನ್ನಿಂದ ಸಾಧ್ಯವೆ? ಎಂದು ಯೋಚಿಸುತ್ತಿರಬೇಕು.

ಬ್ಯಾಂಕ್ ಶಾಖೆಗಳಲ್ಲಿ ಕೆಲಸದ ಒತ್ತಡಗಳು ಹೆಚ್ಚುತ್ತಿವೆ. ನಾವು ಠೇವಣಿಯನ್ನು ಗ್ರಾಹಕನಿಂದ ಪಡೆದಾಗಲೇ, ಅವನು ನಮ್ಮಿಂದ ಮತ್ತೊಂದು ಬಗೆಯ ಸೇವೆಯನ್ನು ನಿರೀಕ್ಷಿಸುವನೆಂದು ನಮಗೆ ಅರಿವಿರಬೇಕು. ಅದಕ್ಕೆ ನಾವು ಸಿದ್ಧರಾಗಬೇಕು. ಸೇವೆಯ ಗುಣಮಟ್ಟ ಕಾಪಾಡಲು, ಹೆಚ್ಚಿಸಲು ಬ್ಯಾಂಕುಗಳು ಪ್ರಯತ್ನಿಸಬೇಕು. ನಾಣ್ಯದ ಎರಡು ಮುಖಗಳಂತೆ ಗ್ರಾಹಕ ಮತ್ತು ಬ್ಯಾಂಕು. 'ನೀನಿಲ್ಲದೆ ಮೂರು ಲೋಕವಿಲ್ಲ' ಎಂದು ಪರಮಾತ್ಮನಿಗೆ ಹೇಳುವಂತೆ, 'ಗ್ರಾಹಕನಿಲ್ಲದೆ ಬ್ಯಾಂಕುಗಳಿಲ್ಲ' ಎಂದು ಬ್ಯಾಂಕಿನ ಸಿಬ್ಬಂದಿ ವರ್ಗ ಅರಿತಿರಬೇಕು. ಸಿಬ್ಬಂದಿ ವರ್ಗದ ನಿರ್ಲಕ್ಷ್ಯ ಮನೋಭಾವ, ಅವನ ಅತಿಯಾದ ಧೋರಣೆಗಳಿಂದ ಬಡವಾಗುವವನು ಗ್ರಾಹಕ. ಸಮಯಕ್ಕೆ ಸರಿಯಾದ ಸೌಲಭ್ಯ ಸಿಗದೆ, ಬ್ಯಾಂಕನ್ನು ಬಯ್ಯುತ್ತಾ ಹಿನ್ನಡೆಯುತ್ತಾನೆ. ಅಂದರೆ ಇಲ್ಲಿ ದೂರಿನ ಉಗಮವಾಗುತ್ತದೆ.

## ದೂರು ನಿವಾರಣೆ

ಗ್ರಾಹಕ ಸೇವೆ ಔಚಿತ್ಯ ಪೂರ್ಣವಾಗಿದ್ದರೆ, ಅಂದರೆ ಬ್ಯಾಂಕರನು

ತನ್ನ ಕೆಲಸಗಳ ರೀತಿರಿವಾಜುಗಳಿಗೆ ಧಕ್ಕೆ ಬಾರದಂತೆ, ಗ್ರಾಹಕನಿಗೆ ತೃಪ್ತಿಯಾಗುವಂತೆ ಸೇವೆಗಳನ್ನು ಸಲ್ಲಿಸಿದರೆ ದೂರುಗಳನ್ನು ನಿವಾರಿಸಬಹುದು.

1 ಗ್ರಾಹಕ ತನ್ನ ಖಾತೆಯಲ್ಲಿರುವ ಹಣಕ್ಕೆ ಸಮನಾಗಿ, ಇತರೆ ನಿಯಮಗಳನ್ನು ಮೀರದಂತೆ ಚೆಕ್ ಬರೆದಿದ್ದಲ್ಲಿ, ಬ್ಯಾಂಕರನು ಕೂಡಲೇ ಹಣ ಪಾವತಿ ಮಾಡಬೇಕು. ಉದಾಸೀನನಾದರೆ ದೂರು ಪ್ರಾರಂಭವಾಗುತ್ತದೆ.

2 ಬ್ಯಾಂಕರನು ತನ್ನ ಗ್ರಾಹಕನ ಖಾತೆಗಳ ವಿವರಗಳನ್ನು ರಹಸ್ಯವಾಗಿಡಬೇಕು.

3 ಬ್ಯಾಂಕರನು ಗ್ರಾಹಕನ ಹೊರ ಊರಿನ, ಬೇರೆ ಬ್ಯಾಂಕುಗಳ ಚೆಕ್ಕುಗಳ ಹಣವನ್ನು ಸಂಗ್ರಹಿಸಿ ಅವನ ಖಾತೆಗೆ ತಡವಾಗದಂತೆ ಜಮಾ ಮಾಡುವ ಕೆಲಸವನ್ನು ಜಾಗ್ರತೆ ವಹಿಸಿ ನಿರ್ವಹಿಸಬೇಕು. ಸಮಯಕ್ಕೆ ಸರಿಯಾಗಿ ಜಮಾ ಆಗದೆ ಗ್ರಾಹಕನ ಚೆಕ್‌ಗಳನ್ನು ಖಾತೆಯಲ್ಲಿ ಹಣ ಸಾಕಷ್ಟು ಇಲ್ಲವೆಂದು ಹಿಂತಿರುಗಿಸಿದರೆ ಬ್ಯಾಂಕರನು ತಾನಾಗಿಯೇ ದೂರಿನ ಹಾದಿಯಲ್ಲಿ ಹೆಜ್ಜೆ ಇಟ್ಟಂತಾಗುತ್ತದೆ.

4 ಗ್ರಾಹಕನ ಖಾತೆಗಳನ್ನು ರದ್ದುಪಡಿಸಬೇಕಾದಾಗ ಅವನಿಗೆ ಮುಂಚಿತವಾಗಿ ಪತ್ರ ಬರೆದು ತಿಳಿಸಿ ಮುಚ್ಚಬೇಕು. ಇಲ್ಲವಾದಲ್ಲಿ ದೂರು ನ್ಯಾಯಾಲಯದವರೆಗೂ ಹೋಗಬಹುದು.

**ಗ್ರಾಹಕ ಸೇವಾ ಸಮಿತಿ**

ಇದನ್ನು ನಿವಾರಿಸಲು ಗ್ರಾಹಕ ಸೇವಾ ಸಮಿತಿಯ ಶಿಫಾರಸುಗಳು ಜಾರಿಗೆ ಬಂದಿವೆ. 1991ರಲ್ಲಿ ನಡೆದ ಗೋಯಿಪೋರಿಯಾ ಸಮಿತಿ ವರದಿಯ ಸಲಹೆಗಳು ಅನುಷ್ಠಾನಕ್ಕೆ ಬಂದಿವೆ. ಸರಾಫ್' ಸೇವೆ, ಸೇವಾ ಅವಧಿಯಲ್ಲಿ ಮಧ್ಯೆ ತಡೆಯುಂಟಾಗದಂತೆ ನಡೆಸುವುದು, ಹಳೆಯ ಹಾಗೂ ಹರಿದ ನೋಟುಗಳ ಬದಲಾವಣೆ, ಅಂತರರಾಷ್ಟ್ರೀಯ ಬ್ಯಾಂಕ್ ವ್ಯವಹಾರಗಳ ಖಾತೆಗಳ ಮೇಲೆ ಮತ್ತು ಸಣ್ಣ ಹಾಗೂ ದೊಡ್ಡ ಕೈಗಾರಿಕಾ ವಲಯಗಳ ಹಣಕಾಸು ವ್ಯವಹಾರಗಳ ಕಡೆ ಇನ್ನೂ ಹೆಚ್ಚು ಗಮನವಿಡುವುದು, ಉದ್ಯೋಗಿಗಳನ್ನು ಇನ್ನೂ ಹೆಚ್ಚು ಜವಾಬ್ದಾರಿಯುತರನ್ನಾಗಿ ಮಾಡುವುದು ಹಾಗೂ ಗ್ರಾಹಕರೊಂದಿಗಿನ ಸ್ನೇಹ, ಕೆಲಸಗಳ ಬಗೆಗೆ ತರಬೇತಿ ಮತ್ತು ಪ್ರೋತ್ಸಾಹ ಮುಂತಾದವುಗಳನ್ನು ಅನುಷ್ಠಾನಕ್ಕೆ ತರುವುದು—ಆ ಸಮಿತಿಯ ವರದಿಗಳು. ಆದರೆ ಎಲ್ಲಾ ಶಾಖೆಗಳಲ್ಲೂ ಈ ವರದಿಗಳು ಜಾರಿಗೆ ಬಂದಿಲ್ಲ. ಸರಾಫ್‌ಸೇವೆ, ನೋಟುಗಳ ಬದಲಾವಣೆ ಕಾರ್ಯವನ್ನಾದರೂ, ಕೊನೇಪಕ್ಷ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಶಾಖೆಗಳಲ್ಲಿ ಜಾರಿಗೆ ತರಬೇಕು. ಹಳ್ಳಿಯ ಚಿಕ್ಕಪುಟ್ಟ ಶಾಖೆಗಳಲ್ಲಂತೂ ಈ ಸೌಲಭ್ಯ ಸಾಧ್ಯವೇ ಇಲ್ಲವೇನೊ. ನಗರದ ಶಾಖೆಗಳಲ್ಲಿ ಸಾಧ್ಯವಿದ್ದರೂ ಕೆಲವೊಮ್ಮೆ ಲೆಕ್ಕಾಧಿಕಾರಿಯ ಧೋರಣೆಯಿಂದಾಗಿ, ಮತ್ತೇನೊ ಕಾರಣದಿಂದ ಗ್ರಾಹಕ ಈ ಸೇವಾ ಸೌಲಭ್ಯದಿಂದ ವಂಚಿತನಾಗಿರುತ್ತಾನೆ. ಗ್ರಾಹಕ ಕೇಳುವ ನೋಟುಗಳೆಲ್ಲವನ್ನೂ ಕೊಡಲಾಗದಿದ್ದರೆ, ನಮ್ಮ ಮಿತಿ ಏನು ಎಂದು ಅವನಿಗೆ ತಿಳಿಯಪಡಿಸಿ, ಸ್ವಲ್ಪ ಮಟ್ಟಿಗಾದರೂ ಅವನು ಕೇಳುವ ನೋಟುಗಳನ್ನು ಕೊಟ್ಟು ತೃಪ್ತಿಪಡಿಸಲು ಪ್ರಯತ್ನಿಸಬೇಕು.

**ಹೊಂದಾಣಿಕೆ**

ಸಿಬ್ಬಂದಿ ಹಾಗೂ ವ್ಯವಸ್ಥಾಪಕ ವರ್ಗದವರಲ್ಲಿ, ಸಿಬ್ಬಂದಿ-ಸಿಬ್ಬಂದಿಗಳಲ್ಲಿ, ಆಡಳಿತ ವರ್ಗದವರಲ್ಲಿ, ಎಲ್ಲರಲ್ಲಿಯೂ ಪರಸ್ಪರ ಹೊಂದಾಣಿಕೆ ಇರಬೇಕು. 'ಏತಿ ಅಂದರೆ ಪ್ರೇತಿ' ಎಂದು ಹೇಳುವ ರೀತಿಯಲ್ಲಿ ಸಂಬಂಧಗಳಿದ್ದರೆ ಗ್ರಾಹಕ ಸೇವೆ ಕುಂಠಿತವಾಗುತ್ತದೆ, ದೂರುಗಳಿಗೆ ಅವಕಾಶವಾಗುತ್ತದೆ. ಉದಾಹರಣೆಗೆ: ಮುಂಗಟ್ಟೆಯಲ್ಲಿ ಹಣ ಜಮಾ ಮಾಡಲು ಜನ ಸಾಲಾಗಿ ನಿಂತಿದ್ದರೂ, ಆಡಳಿತಗಾರನಿಗೂ, ಆ ಮುಂಗಟ್ಟೆ ಗುಮಾಸ್ತನಿಗೂ ವೈಮನಸ್ಸಿದ್ದಲ್ಲಿ, ಆಡಳಿತಗಾರ ಆ ವ್ಯಕ್ತಿಯೇ ತೊಂದರೆ ಅನುಭವಿಸಲಿ ಎನ್ನುವ ಮನೋಭಾವದಿಂದ ಬೇರೆ ಮುಂಗಟ್ಟೆಯನ್ನು ತೆರೆಯದಿರಬಹುದು. ಇದರಿಂದ ಗ್ರಾಹಕನಿಗೆ ಯಾವ ರೀತಿ ತೊಂದರೆ ಆಗುವುದೆಂದು ಯೋಚಿಸುವಷ್ಟು ತಾಳ್ಮೆಯೂ ಅವನಲ್ಲಿ ಇಲ್ಲವಾಗಿರುತ್ತದೆ. ಇಲ್ಲಿ ಗ್ರಾಹಕ ಸೇವೆ ಗೌಣವಾಗುತ್ತದೆ. ಗ್ರಾಹಕ ನಿರಾಶೆ, ತನ್ನ ಇತರ ಕೆಲಸಗಳಿಗಾದ ತೊಂದರೆ ಇವುಗಳಿಂದ ಬ್ಯಾಂಕಿನ ಎಲ್ಲರನ್ನೂ, ಎಲ್ಲ ಕೆಲಸ-ಕಾರ್ಯಗಳ ಬಗೆಗೆ ವಾಸ್ತವದ ಜೊತೆಗೆ ಊಹಿಸಿಯೂ, ನಿಂದಿಸುತ್ತಾನೆ. ಇದರಿಂದ ಬ್ಯಾಂಕು ಹಾಗೂ ಗ್ರಾಹಕನ ನಡುವಣ ಸಂಬಂಧ ಕಡಿಯಬಹುದು. ವ್ಯಾಕುಲಗೊಂಡ ಗ್ರಾಹಕ ಮತ್ತೊಂದು ಬ್ಯಾಂಕಿನಲ್ಲಿ ತನ್ನ ವ್ಯವಹಾರ ಪ್ರಾರಂಭಿಸಬಹುದು. ಇದಕ್ಕೆ ಬದಲು ಬ್ಯಾಂಕು ಗ್ರಾಹಕನ ಇಂಗಿತಕ್ಕೆ, ಬೇಡಿಕೆಗೆ, ದೂರಿಗೆ ಕೂಡಲೇ ಪರಿಹಾರ ಹುಡುಕಿ, ತನ್ನ ಒಳಜಗಳವನ್ನು ಹೊರತರದೆ ತ್ವರಿತಕ್ರಮ ಅನುಷ್ಠಾನಕ್ಕೆ ತಂದರೆ, ಅದರಿಂದ ಮಹತ್ವಪೂರ್ಣ ಪರಿಣಾಮ ಉಂಟಾಗುತ್ತದೆ. ಗ್ರಾಹಕನಲ್ಲಿ ಬ್ಯಾಂಕಿನ ಬಗೆಗೆ ಒಂದು ಒಳ್ಳೆಯ ಭಾವನೆ ಬೆಳೆದು, ಅವನು ಇನ್ನೂ ಹತ್ತು ಮಂದಿಯನ್ನು ಬ್ಯಾಂಕಿನ ವ್ಯವಹಾರಕ್ಕೆ ಕರೆತರಲು ಅನುವಾಗುತ್ತದೆ. ಗ್ರಾಹಕ ಸೇವೆ ಎಲ್ಲಾ ಹಂತಗಳಲ್ಲೂ ಸಿಬ್ಬಂದಿಯ ಪರಸ್ಪರ ಸಹಕಾರದೊಂದಿಗೇ ಆರಂಭವಾಗುವುದು.

**ಬಗೆಬಗೆಯ ದೂರುಗಳು**

ಬ್ಯಾಂಕುಗಳಿಗೆ ಬರುವ ಗ್ರಾಹಕರಲ್ಲಿ ಅನೇಕ ವಿಧದವರು, ಬೇರೆ ಬೇರೆ ವರ್ಗದವರು—ಅಂದರೆ, ವಿದ್ಯಾವಂತರು, ಅನಕ್ಷರಸ್ಥರು, ವಿದ್ಯಾರ್ಥಿಗಳು, ವ್ಯಾಪಾರಿಗಳು, ಇತರೆ ಉದ್ಯೋಗಗಳಲ್ಲಿರುವವರು, ಗೃಹಿಣಿಯರು,ರಾಜಕಾರಣಿಗಳು ಹೀಗೆ ವಿಭಿನ್ನ ಮನೋಭಾವದವರು— ಇರುತ್ತಾರೆ. ಪ್ರತಿಯೊಬ್ಬ ಗ್ರಾಹಕನೂ ಒಂದೊಂದು ರೀತಿಯ ಸೇವೆಯನ್ನು ನಿರೀಕ್ಷಿಸುತ್ತಾನೆ. ಮಹಾನಗರಗಳಲ್ಲಿರುವ ಗ್ರಾಹಕರು ಶೀಘ್ರವಾದ ಸೇವೆ ನಿರೀಕ್ಷಿಸುತ್ತಾರೆ. ಅವರಿಗೆ ಸಮಯ ಬಹಳ ಅವಶ್ಯಕ. ಅವರ ಸೇವೆಯಲ್ಲಿ ಸ್ವಲ್ಪ ತಡವಾದರೂ ಅವರು

ದೂರು ಸಲ್ಲಿಸುತ್ತಾರೆ. ತಿಂಗಳ ಮೊದಲ ಹಾಗೂ ಕೊನೇ ವಾರಗಳಲ್ಲಿ ಪಾವತಿ ಹಾಗೂ ಜಮಾ ಮೊಬಲಗುಗಳನ್ನು ಹೆಚ್ಚಾಗಿ ತೆರೆದರೆ, ಪಿಂಚಣಿದಾರರಿಗೆ, ಉಪಾಧ್ಯಾಯ ವರ್ಗದವರಿಗೆ, ಸರ್ಕಾರಿ ಖಾತೆಗಳ ವ್ಯವಹಾರಗಳಿಗೆ ಹೆಚ್ಚಿನ ಅನುಕೂಲವುಂಟಾಗುತ್ತದೆ. ತಡವಾಗುವುದೆಂಬ ದೂರಿಗೆ ಸ್ವಲ್ಪಮಟ್ಟಿಗಾದರೂ ಇತಿಶ್ರೀ ಹಾಡಿದಂತಾಗುತ್ತದೆ. ಇನ್ನು ಹಳ್ಳಿಗಳಲ್ಲಿ ಬ್ಯಾಂಕರನು ಗ್ರಾಹಕನ ಕಷ್ಟ-ಸುಖಗಳ ಬಗೆಗೆ ವಿಚಾರಿಸದೆ, ಕೂಡಲೇ ಅವನ ಕೆಲಸ ಮಾಡಿಕೊಟ್ಟಲ್ಲಿ ಅವನು ಬೇಸರಿಸಬಹುದು. ಸಂದರ್ಭಕ್ಕೆ ಅನುಗುಣವಾದ ಗ್ರಾಹಕನ ಮನೋಭಾವಕ್ಕೆ ಹದವರಿತು ಸೇವೆ ಸಲ್ಲಿಸಬೇಕಾಗುತ್ತದೆ. ನಗುಮೊಗದ ಸೇವೆ ಸಲ್ಲದಿದ್ದಲ್ಲಿ ಗ್ರಾಹಕನು ಬೇಸರಿಸಬಹುದು. ತನ್ನ ಮನೆಯ, ಸಂಸಾರದ, ವೈಯಕ್ತಿಕ ಸಮಸ್ಯೆಗಳನ್ನು ಬ್ಯಾಂಕಿಗೆ ಬ್ಯಾಂಕರನು ತರಬಾರದು. ತನ್ನ ಮನಸ್ಸೇ ಭಾರವಾಗಿದ್ದರೆ, ಸೌಹಾರ್ದಯುತ ಸೇವೆ ಅವನಿಂದ ಸಾಧ್ಯವಾಗದಿರಬಹುದು. ಹರಿದ ನೋಟು ಅವನು ತಂದ ದಿನವೇ ಬದಲಾಗದಿದ್ದಲ್ಲಿ, ತನ್ನ ಚೆಕ್ ಬೇಗನೆ ತನ್ನ ಖಾತೆಗೆ ಜಮಾ ಆಗದಿದ್ದಲ್ಲಿ, ಖಾತೆ ಪುಸ್ತಕ ಸರಿಯಾಗಿ, ಕೂಡಲೇ ಬರೆದುಕೊಡದಿದ್ದಾಗ, ಸಾಲ ಮಂಜೂರಾತಿಗೆ ಅಲೆದಾಡಿಸಿದಾಗ, ಕ್ಲೈಮ್ ಇತ್ಯರ್ಥಗಳಿಗೆ ಓಡಾಡಿಸಿದಾಗ, ದೂರವಾಣಿಯಲ್ಲಿ ಗ್ರಾಹಕನೊಂದಿಗೆ ಮಾತನಾಡುವಾಗ ಪಾಲಿಸಬೇಕಾದ ವಿನಯವನ್ನು ಮೀರಿದಾಗ, ಹುಂಡಿ ಪಾವತಿಗಳಲ್ಲಿ, ಹುಂಡಿ ಬರೆದು ವಿತರಿಸಿಕೊಡಲು ನಿಧಾನವಾದಾಗ, ಹೀಗೆ ಅನೇಕ ರೀತಿಯ ದೂರುಗಳನ್ನು ನಾವು ಕೇಳುತ್ತಿರುತ್ತೇವೆ.

## ಬೇಕಾಗಿದೆ—ಜಾಣ್ಮೆ, ಉತ್ಸಾಹ

ಈ ದೂರುಗಳಿಗೆ ಕಾರಣ, ಗ್ರಾಹಕ ಈಗ ಮೊದಲಿನಂತಿಲ್ಲ. ಅವನು ಬ್ಯಾಂಕಿನ ವ್ಯವಹಾರಗಳಲ್ಲಿ ಪ್ರಬುದ್ಧನಾಗಿದ್ದಾನೆ. ಅವನು ಉದ್ಯೋಗಿಗಳಿಂದ ಹೆಚ್ಚಿನ ಮಟ್ಟದ ದಕ್ಷತೆ ಹಾಗೂ ಕ್ಷಿಪ್ರತೆಯಿಂದ ಕೂಡಿದ ಸೇವೆ ನಿರೀಕ್ಷಿಸುತ್ತಾನೆ. ಉದ್ಯೋಗಿಗಳಿಗೆ ಕೆಲಸದಲ್ಲಿ ದೊರೆಯುತ್ತಿರುವ ಭದ್ರತೆ, ಅವನ ಒಡ್ಡಿಗಳೂ, ವಿನಯಪೂರಿತ ಸೇವೆಯ ಅಭಾವಗಳೂ ದೂರುಗಳಿಗೆ ಕಾರಣವಾಗುತ್ತಿವೆ.

ಬ್ಯಾಂಕು ತನ್ನ ವಿಧಿ, ನಿಯಮಗಳನ್ನು ಅತಿಯಾಗಿ ಗ್ರಾಹಕನ ಮೇಲೆ ಹೇರದೆ, ಅನುಸರಿಸಬೇಕು. ಸಾಧ್ಯವಾದ ಮಟ್ಟಿಗೆ ಗ್ರಾಹಕನನ್ನು ತೃಪ್ತಿಗೊಳಿಸಲು ತ್ವರಿತ ಕ್ರಮ ಕೈಗೊಳ್ಳಲು ಪ್ರಯತ್ನಿಸಬೇಕು. ಉದಾ : ಬೇಡಿಕೆ ಹುಂಡಿ ಬರೆಯುವಾಗ, ಗ್ರಾಹಕ ಬಹಳ ಆತುರದಲ್ಲಿದ್ದರೆ, ಕೂಡಲೇ ಅವನಿಗೆ ಹುಂಡಿ ಬರೆದುಕೊಟ್ಟು ಕಳುಹಿಸಿ, ನಂತರ ತನ್ನ ಪುಸ್ತಕಗಳಲ್ಲಿ ಬರೆದರೆ, ಅವನ ದೂರಿಗೆ ಅವಕಾಶವಿರುವುದಿಲ್ಲ. ಅಸಾಧ್ಯವಾದಾಗ, ಗ್ರಾಹಕನಿಗೆ, ಬ್ಯಾಂಕಿನ ಕೆಲಸಗಳ ಬಗೆಗೆ ತಿಳುವಳಿಕೆ ಹೇಳಿ, ತಡವಾದರೂ ಗ್ರಾಹಕನು ತನ್ನ ಕೆಲಸಗಳನ್ನು ಸಮರ್ಪಕವಾಗಿ ಮಾಡಿಕೊಳ್ಳಲು ಸಹಾಯ ಮಾಡಬೇಕು.

ಚೆಕ್ ಪುಸ್ತಕಗಳನ್ನು ಕೊಡುವುದು, ತೀರುವಳಿ ಚೆಕ್‌ಗಳನ್ನು ತೆಗೆದುಕೊಳ್ಳುವುದು, ಬಿಲ್‌ಗಳನ್ನೂ ಹೊರ ಊರಿನ ಚೆಕ್‌ಗಳನ್ನೂ ತೆಗೆದುಕೊಳ್ಳುವುದು ಮುಂತಾದ ಕೆಲಸಗಳನ್ನು ಆಯಾ ಗುಮಾಸ್ತರುಗಳೇ ಮಾಡಬೇಕೆಂಬ ಕಡ್ಡಾಯವೇನಿಲ್ಲದೆ, ಆಡಳಿತಗಾರರೂ ಸಹಕರಿಸಿದರೆ, ಗ್ರಾಹಕನಿಗೆ ತ್ವರಿತಗತಿಯ ಸೇವಾ ಸೌಲಭ್ಯ ಮಾಡಿಕೊಟ್ಟಂತಾಗುತ್ತದೆ. ಪಾಸ್ ಪುಸ್ತಕಗಳನ್ನು ಬರೆದುಕೊಡಲು ತಡವಾಗುವುದಾದರೆ, ಜೆರಾಕ್ಸ್ ಮಾಡಿಸಿಕೊಟ್ಟರೆ ಕೆಲಸದ ವೇಳೆ ಉಳಿಯುತ್ತದೆ. ದೂರನ್ನೂ ತಡೆಗಟ್ಟಿದಂತಾಗುತ್ತದೆ.

ಗುಮಾಸ್ತರುಗಳು ಕೂಡ ಕೆಲಸದ ವೇಳೆಯಲ್ಲಿ ಸ್ನೇಹಿತರೊಡನೆ ಮಾತನಾಡುತ್ತಲಿರುವುದು, ಕಾಫಿ ಕುಡಿಯಲೆಂದು ಪದೇ ಪದೇ ಹೋಗುವುದು ಸಿಗರೇಟು ಇತ್ಯಾದಿ ಸೇವನೆಯಲ್ಲಿ ಕಾಲ ಕಳೆಯುವುದು, ಮುಂತಾದವುಗಳಿಗೆ ತಡೆಹಾಕಿ, ಕೆಲಸದ ವೇಳೆಯಲ್ಲಿ, ಅದರ ಕಡೆ ಗಮನಕೊಟ್ಟು ಸಹಕರಿಸಿದರೆ ನಿಜಕ್ಕೂ ಉತ್ತಮ ಸೇವೆ ಗ್ರಾಹಕನಿಗೆ ತಲುಪುತ್ತದೆ. ಶಾಖಾ ವ್ಯವಸ್ಥಾಪಕರುಗಳು ತಮ್ಮದೇ ಕೆಲಸಗಳ ಒತ್ತಡದಿಂದ ಸಿಬ್ಬಂದಿ ವರ್ಗದವರನ್ನು ನಿರ್ಲಕ್ಷಿಸಿದರೆ, ಪರಿಣಾಮ ಗ್ರಾಹಕನ ಮೇಲಾಗುತ್ತದೆ. ವ್ಯವಸ್ಥಾಪಕರು ಕೆಲಸದಲ್ಲಿ ಒಗ್ಗಿನ ಬುಗ್ಗೆಯಂತೆ ಉತ್ಸಾಹದಿಂದ ಸಹೋದ್ಯೋಗಿಗಳೊಡನೆ ತಾನೂ ಒಬ್ಬನಾಗಿ ಬೆರೆತು, ನವಿರಾದ ಆಜ್ಞೆ ಮಾಡಿ, ಕೆಲಸ ಮಾಡಿಸಿಕೊಳ್ಳುವ ಜಾಣ್ಮೆ ಹೊಂದಿರಬೇಕು. ಮ್ಯಾನೇಜರ್‌ಗಿರಿಯ ಗತ್ತು ತೋರಿಸಿದರೆ ಅವರ ಕುತ್ತಿಗೆಗೇ ಬರುತ್ತದೆ ಕುತ್ತು.

## ಪ್ರಾಮಾಣಿಕ ಪ್ರಯತ್ನ

ಈ ಎಲ್ಲಾ ಕೊರತೆಗಳನ್ನೂ ತುಂಬಿಸಲು ಸಾಧ್ಯವಾಗದಿದ್ದರೂ 'ಪ್ರಯತ್ನ ನಮ್ಮದು, ಫಲಾಫಲ ಭಗವಂತನದು' ಎನ್ನುವಂತೆ ಪ್ರತಿ ತಿಂಗಳೂ ವ್ಯವಸ್ಥಾಪಕರು ಹಾಗೂ ಸಿಬ್ಬಂದಿಗಳು ಒಂದು ನಿಗದಿತ ದಿನ, ನಿರ್ಧರಿತ ವೇಳೆಯಲ್ಲಿ ಸಭೆ ಸೇರಿ, ಬೇಕು-ಬೇಡಗಳ ಬಗೆಗೆ ಒಬ್ಬರಿಗೊಬ್ಬರು ಸಲಹೆ-ಸೂಚನೆಗಳನ್ನು ಕೊಟ್ಟು ಸಹಕಾರದಿಂದ ಕೆಲಸಗಳನ್ನು ನಿರ್ವಹಿಸಿದರೆ, ಗ್ರಾಹಕನ ದೂರುಗಳಿಗೆ ಅವಕಾಶ ಕೊಡದಂತೆ ಬ್ಯಾಂಕ್ ಕೆಲಸಗಳನ್ನು ನಡೆಸಬಹುದು. ಪ್ರತಿಯೊಬ್ಬ ಉದ್ಯೋಗಿಯೂ ತನ್ನ ಕುಂದು-ಕೊರತೆಗಳ ಬಗೆಗೆ ಚಿಂತಿಸಿ, ಅದರ ಪರಿಣಾಮ ಯಾರ ಮೇಲೆ, ಯಾವ ರೀತಿ ಆಗುತ್ತಿದೆಯೆಂದು ವಿವೇಚಿಸಿದರೆ, ಪರಿಹಾರ ದೊರಕೀತು. ಸಹೋದ್ಯೋಗಿಗಳು ಪರಸ್ಪರ ವ್ಯಂಗ್ಯ, ಅವಹೇಳನ, ಸಿಡಿನುಡಿಗಳನ್ನಾಡದೆ ಸ್ನೇಹಪೂರ್ಣವಾಗಿ ವ್ಯವಹರಿಸಿದರೆ, ಬ್ಯಾಂಕ್ ವಾತಾವರಣವೂ ಸೌಹಾರ್ದಯುತವಾಗಿರುತ್ತದೆ.

ಪ್ರತಿ ಶಾಖೆಯಲ್ಲೂ ಗ್ರಾಹಕರ ದಿನವನ್ನು ತಪ್ಪದೆ ನಡೆಸಬೇಕು. ಈ ಸಭೆಯಲ್ಲಿ ಗ್ರಾಹಕರ ಕುಂದುಕೊರತೆಗಳ ಕುರಿತು ಚರ್ಚಿಸಿ ನಿರ್ಧಾರ ಕೈಗೊಳ್ಳುವ ಪರಿಪಾಠವಿಟ್ಟುಕೊಳ್ಳಬೇಕು. ಈಗ ಜನಹಿತಪಾಲಕರೂ ಮಧ್ಯವರ್ತಿಗಳಾಗಿ ಗ್ರಾಹಕ ಹಾಗೂ ಬ್ಯಾಂಕರನ

[11ನೇ ಪುಟ ನೋಡಿ]

# ಭಾರತೀಯ ರಿಸರ್ವ್ ಬ್ಯಾಂಕಿನ ಇತ್ತೀಚಿನ ಉದರಿ ನೀತಿ

**ಕೆ. ಎಸ್. ಭದ್ರಣ್ಣ**
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು

ಕೇಂದ್ರ ಸರ್ಕಾರದ ಹೊಸ ಆರ್ಥಿಕ ನೀತಿಯ ಅಡಿಯಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ದೇಶದ ನಿಜವಾದ ಕೇಂದ್ರ ಬ್ಯಾಂಕಿನಂತೆ ವರ್ತಿಸಲು ಹೆಚ್ಚು ಹೆಚ್ಚು ಸ್ವಾತಂತ್ರ್ಯ ಪಡೆದು ಕೊಳ್ಳುತ್ತಿದೆ. ಅದರ ಉದರಿ ನೀತಿ ಹೆಚ್ಚು ಅರ್ಥಪೂರ್ಣವಾಗುತ್ತಿದೆ.

ಭಾರತೀಯ ರಿಸರ್ವ್ ಬ್ಯಾಂಕ್ ನಮ್ಮ ದೇಶದ ಕೇಂದ್ರ ಬ್ಯಾಂಕ್. ಎಲ್ಲಾ ದೇಶಗಳಲ್ಲೂ ಇರುವ ಕೇಂದ್ರ ಬ್ಯಾಂಕುಗಳಂತೆ ಭಾರತೀಯ ರಿಸರ್ವ್ ಬ್ಯಾಂಕ್ ಕೂಡ ದೇಶದ ಆರ್ಥಿಕ ನೀತಿಯನ್ನು ಆಚರಣೆಗೆ ತರುವ ಕೇಂದ್ರೀಕೃತ ವ್ಯವಸ್ಥೆಯುಳ್ಳ ಸಂಸ್ಥೆ. ಬ್ಯಾಂಕುಗಳ ಬ್ಯಾಂಕಾದ ರಿಸರ್ವ್ ಬ್ಯಾಂಕು ತನ್ನ ನೀತಿಗಳನ್ನು ಆದೇಶಗಳ ಮೂಲಕ ಎಲ್ಲಾ ಬ್ಯಾಂಕುಗಳಲ್ಲಿ ಜಾರಿಗೆ ಬರುವಂತೆ ನೋಡಿಕೊಳ್ಳುತ್ತಿದೆ. ಸರ್ಕಾರಕ್ಕೂ ಅದು ಸಲಹೆ ಹಾಗೂ ಮಾಹಿತಿಯನ್ನು ತನ್ನ ವರದಿಯ ಮೂಲಕ ತಲುಪಿಸುತ್ತದೆ.

ಭಾರತೀಯ ರಿಸರ್ವ್ ಬ್ಯಾಂಕಿನ ಮುಖ್ಯ ಕಾರ್ಯಗಳೆಂದರೆ, ದೇಶದಲ್ಲಿ ಹಣಪ್ರಸರಣವನ್ನು ನಿಯಂತ್ರಿಸುವುದು, ಹಣದುಬ್ಬರವನ್ನು ತಡೆಗಟ್ಟುವುದು, ರಫ್ತು ವ್ಯಾಪಾರಕ್ಕೆ ಅನುಕೂಲವಾಗುವಂಥ ನೀತಿಗಳನ್ನು ಜಾರಿಗೆ ತರುವುದು, ಬ್ಯಾಂಕುಗಳು ಸಂಗ್ರಹಿಸಿದ ಸಂಪನ್ಮೂಲಗಳ ಸಮಾನ ವಿತರಣೆ, ಹಾಗು ವಿದೇಶಿ ಚಲಾರ್ಥ ವಿನಿಮಯ ಮತ್ತು ಪಾವತಿ ಶಿಲ್ಕುಗಳ ನಿರ್ವಹಣೆ.

ಹಲವಾರು ವರುಷಗಳಿಂದ ಭಾರತೀಯ ರಿಸರ್ವ್ ಬ್ಯಾಂಕ್ ಸರ್ಕಾರದ ನೀತಿಯನ್ನೆ ತನ್ನ ಉದರಿ ನೀತಿಯೆಂದು ಆದೇಶ ಕೊಡುತಿತ್ತು. ಆದರೆ ಡಾ. ಮನಮೋಹನಸಿಂಗ್ ವಿತ್ತ ಸಚಿವರಾದ ಮೇಲೆ ಅವರ ಆಯವ್ಯಯದಂತೆ ರಿಸರ್ವ್ ಬ್ಯಾಂಕಿನ ವರುಷಕ್ಕೆ ಎರಡು ಬಾರಿ ಪ್ರಕಟಪಡಿಸುವ ಆದೇಶಕ್ಕೆ ದೇಶ ಕಾಯುವಂತಾಯಿತು. ಈ ಆದೇಶಗಳೆ 'ಉದರಿ ನೀತಿ' ಎಂದು ಕರೆಸಿಕೊಳ್ಳುತ್ತಿವೆ.

ವಿಶ್ವ ಮಾರುಕಟ್ಟೆಗೆ ಭಾರತವನ್ನು ತಯಾರು ಮಾಡಬೇಕಾದ ಅನಿವಾರ್ಯತೆಯಿಂದ ದೇಶದ ಆರ್ಥಿಕ ದೃಷ್ಟಿಯಲ್ಲಿ ಅನೇಕ ಮಾರ್ಪಾಟು ಅನಿವಾರ್ಯವಾಯಿತು. 'ಮುಚ್ಚಿದ ಆರ್ಥಿಕ ನೀತಿಯಿಂದ' 'ತೆರೆದ ಆರ್ಥಿಕ ನೀತಿಗೆ' ಹಾಗು ಮುಕ್ತಮಾರುಕಟ್ಟೆಗೆ ಅನುವಾಗುವಂತೆ ಆರ್ಥಿಕ ನೀತಿಯನ್ನು ಅನುಸರಿಸುವುದು ಹಾಗೂ ಇದನ್ನು ರಿಸರ್ವ್ ಬ್ಯಾಂಕ್ ತನ್ನ ಉದರಿ ನೀತಿಯಲ್ಲೂ ಅಳವಡಿಸುವುದು ಅನಿವಾರ್ಯವಾಯಿತು.

ಭಾರತೀಯ ರಿಸರ್ವ್ ಬ್ಯಾಂಕು ಉದರಿ ನೀತಿಯನ್ನು ಜಾರಿಗೆ ತರಲು ಈ ಕೆಳಕಂಡ ಮಾರ್ಗಗಳನ್ನು ಅನುಸರಿಸುತ್ತದೆ :

**ಕ್ರಮಗಳು**

1 ಬಡ್ಡಿದರಗಳ (ಠೇವಣಿ ಮತ್ತು ಮುಂಗಡ) ನಿಯಂತ್ರಣದಿಂದ,
2 ಪರಿಮಿತ ದ್ರವತ್ವ ಪ್ರಮಾಣದ ಮಟ್ಟ ನಿರ್ವಹಣೆಯಿಂದ,
3 ನಗದು ಮೀಸಲು ಅನುಪಾತಗಳನ್ನು ನಿಯಂತ್ರಿಸುವುದರಿಂದ,
4 ವಿದೇಶಿ ವಿನಿಮಯ ವಿನಿಯಮನ ಅಧಿನಿಯಮಗಳಿಂದ,
5 ಉದರಿ ಮಟ್ಟ ನಿಯಂತ್ರಣ ಹಾಗು ನಿರ್ಲಕ್ಷಿತ ಹಾಗು ಆದ್ಯತಾ ವಲಯಗಳಿಗೆ ಉದರಿ ಹರಿಯುವಂತೆ ನಿರ್ದೇಶನಗಳಿಂದ.

ಈ ಬಾರಿಯ ಉದರಿ ನೀತಿಯ ಸಮಯದಲ್ಲಿ ಭಾರತದ ಆರ್ಥಿಕ ಪರಿಸ್ಥಿತಿ ಆಶಾದಾಯಕವಾಗಿದೆ. ಕಾರಣ ಹಣಪ್ರಸರಣ ಶೇ. 16, ಸ್ಥೂಲದೇಶಿಯ ಉತ್ಪನ್ನ ಶೇ. 5.1, ಕೈಗಾರಿಕಾ ಬೆಳವಣಿಗೆ ಶೇ.13, ವಿದೇಶಿ ಶಿಲ್ಕು 19 ಬಿಲಿಯನ್, ಡಾಲರ್‌ನ ಎದುರು ರೂಪಾಯಿ ಸ್ಥಿರತೆ, ಹಣದುಬ್ಬರ ಶೇ. 8.27. ದತ್ತಾಂಶಗಳ ಪ್ರಕಾರ ಕಳೆದ ವರುಷಗಳಿಗೆ ಹೋಲಿಸಿದರೆ ಈ ವರುಷದ ಸಾಧನೆ ಉತ್ತಮ.

ಕಳೆದ ಮೂರು ವರುಷಗಳಿಂದ ಗತಿಶೀಲ ಚಿಂತನೆಯಿಂದ ಕೂಡಿದ ಆರ್ಥಿಕ ದೃಷ್ಟಿಯ ಉದರಿ ನೀತಿ ಆದರಲ್ಲೂ ಬಡ್ಡಿ ನಿಯಂತ್ರಣದಲ್ಲಿ ಆದ ಬದಲಾವಣೆ ಕುತೂಹಲಕಾರಿ. ಹಂತಹಂತವಾಗಿ ಬಡ್ಡಿ ನಿಯಂತ್ರಣವನ್ನು ಸಡಿಲಿಸುತ್ತ ಬಂದಿದೆ.

**ಉದರಿ ನೀತಿಯ ಮುಖ್ಯಾಂಶಗಳು**

ಈ ಉದರಿ ನೀತಿಯ ಮುಖ್ಯಾಂಶಗಳು ಈ ಕೆಳಕಂಡಂತಿದೆ.

1 ಎರಡು ಲಕ್ಷದ ಮೇಲಿನ ಸಾಲಗಳಿಗೆ ಕನಿಷ್ಠ ಬಡ್ಡಿ ಮಿತಿ ರದ್ದು.
2 25,000 ರೂಗಳಿಂದ 2 ಲಕ್ಷದ ರೂಗಳ ಸಾಲಗಳ ಬಡ್ಡಿಗಳನ್ನು ಶೇ. 13.5ಕ್ಕೆ ಇಳಿಸಲಾಗಿದೆ.

3 ಉಳಿತಾಯ ಖಾತೆ ಬಡ್ಡಿಯನ್ನು ಶೇ. 5ರಿಂದ ಶೇ. 4.5ಕ್ಕೆ ಕಡಿಮೆ ಮಾಡಲಾಗಿದೆ.

4 6 ತಿಂಗಳಿನಿಂದ 3 ವರ್ಷಗಳ ಅನಿವಾಸಿ ವಿದೇಶಿ ಖಾತೆಗಳ ಬಡ್ಡಿಯನ್ನು ಶೇ. 10ರಿಂದ ಶೇ. 8ಕ್ಕೆ ಇಳಿಸಲಾಗಿದೆ.

5 ವಿದೇಶಿ ಕರೆನ್ಸಿ ಅನಿವಾಸಿ ಠೇವಣಿಗಳ ಮೇಲೆ ಶೇ. 7.5ರಷ್ಟು ನಗದು ಮೀಸಲು ಜಾರಿಗೆ.

6 ಪರಿನಿಯತ ದ್ರವತ್ವ ಅನುಪಾತ ಶೇ. 33.75ರಿಂದ ಶೇ. 31.5ಕ್ಕೆ ಇಳಿತ.

7 ಸಹಕಾರಿ ಬ್ಯಾಂಕುಗಳ (ಗ್ರಾಮಾಂತರ) ಠೇವಣಿ ಹಾಗು ಸಾಲಗಳ ಮೇಲಿನ ಬಡ್ಡಿ ಮಿತಿಯ ನಿಯಂತ್ರಣ ರದ್ದು.

8 ನಗದು ಮೀಸಲು ಅನುಪಾತದ ಶೇ. 85ರಷ್ಟನ್ನು ನಗದು ಶಿಲ್ಕಿನಲ್ಲಿ ಇಡಬೇಕು. ಇಲ್ಲವಾದಲ್ಲಿ ಆ ಪಕ್ಷಕ್ಕೆ ಬಡ್ಡಿ ಪಾವತಿ ಇಲ್ಲ (ರಿಸರ್ವ್ ಬ್ಯಾಂಕಿನಿಂದ).

9 ವಾಣಿಜ್ಯ ಪತ್ರಗಳಿಗೆ ಪರ್ಯಾಯ ವ್ಯವಸ್ಥೆ ರದ್ದು.

10 ಕೃಷಿಗೆ ನಗದು ಸಾಲ ಸೌಲಭ್ಯ.

11 ಬ್ಯಾಂಕಿನ ಅವಧಿ ಸಾಲಗಳ ಗರಿಷ್ಠ 50 ರೂ.ಗಳ ಮಿತಿಗೆ ವಿದಾಯ. 200 ರೂ.ಗಳ ವರೆಗೆ ಇದ್ದ ಮಿತಿ 500 ರೂ.ಗಳ ವರೆಗೆ ಏರಿಕೆ.

12 ನೇರ ಗೃಹಸಾಲದ ಮಿತಿ 3ಲಕ್ಷದಿಂದ 10 ಲಕ್ಷಕ್ಕೆ ಏರಿಕೆ.

13 25,000 ರೂ. ವರೆಗಿನ ಬ್ಯಾಂಕಿನ ನಿಷ್ಕ್ರಿಯ ಸಾಲಗಳ ಮೇಲೆ ತೆಗೆದಿರುಸುವಿಕೆಯಲ್ಲಿ ಬದಲಾವಣೆ. ಸಾಲದ ಶೇ. 7.5ರಷ್ಟನ್ನ 1995ರಲ್ಲಿ ಹಾಗೂ ಶೇ. 10ರಷ್ಟು 1996ರ ಮಾರ್ಚಿನಲ್ಲಿ ತೆಗೆದಿರಿಸಬೇಕು.

14 ಠೇವಣಿ ಸಾಲಗಳ ಮೇಲಿನ ಅಂತರವನ್ನು ಆಯಾ ಬ್ಯಾಂಕುಗಳೆ ನಿರ್ಧರಿಸಬೇಕು.

15 ರಫ್ತು ಘಟಕಗಳ ಉಪ ಪೂರೈಕೆದಾರರಿಗೆ ರಫ್ತು ಸಾಲಗಳ ಸೌಲಭ್ಯ.

16 ಆರಿಸಿದ ಉದರಿ ನಿಯಂತ್ರಣ ನಿಯಮಗಳಿಂದ ಅಕ್ಕಿ ಗೋಧಿಗಳಿಗೆ ರಿಯಾಯಿತಿ, ಹತ್ತಿಯ ಮೇಲಿನ ಸಾಲದ ವಿಭಾಗದಲ್ಲಿ ಇಳಿತ :

**ಪರಿಣಾಮ**

ಕೆಲವು ಮುಖ್ಯವಾದ ನೀತಿಗಳು ಬ್ಯಾಂಕುಗಳ ಮೇಲೆ ತೀವ್ರವಾದ ಪರಿಣಾಮ ಬೀರುತ್ತವೆ. ಅವುಗಳಲ್ಲಿ ಮೊದಲನೆಯದು :

**1 ಬಡ್ಡಿದರ ನಿಯಂತ್ರಣ ರದ್ದು ಹಾಗು ಅದರ ಪರಿಣಾಮಗಳು**

ಕನಿಷ್ಠ ಬಡ್ಡಿದರ ನಿರ್ಧಾರವನ್ನು ಆಯಾ ಬ್ಯಾಂಕ್ ಬೋರ್ಡ್‌ಗಳಲ್ಲಿಟ್ಟು ಅನುಮೋದನೆ ಪಡೆಯಬೇಕು. ಈ ಬದಲಾವಣೆಗೆ ತತ್‌ಕ್ಷಣ ಪ್ರತಿಕ್ರಿಯಿಸಿದ ಬ್ಯಾಂಕುಗಳು ಭಾರತೀಯ ಸ್ಟೇಟ್ ಬ್ಯಾಂಕ್ ಹಾಗೂ ಸ್ಟಾನ್‌ಚಾರ್ಟ್ ಬ್ಯಾಂಕ್.

ದೊಡ್ಡ ಬ್ಯಾಂಕುಗಳಿಗೆ ಸಂಪನ್ಮೂಲದ, ಅದರಲ್ಲೂ ಕಡಿಮೆ ಅಥವಾ ಶೂನ್ಯದರ ಬಡ್ಡಿಯ, ಉಳಿತಾಯ ಹಾಗು ಚಾಲ್ತಿ ಖಾತೆಗಳಲ್ಲಿ ಠೇವಣಿ ಹೆಚ್ಚಾಗಿರುವುದರಿಂದ ಕಡಿಮೆ ಬಡ್ಡಿ ದರದಲ್ಲಿ ಸಾಲ ಕೊಡಬಹುದು. ಆದರೆ ಸಂಪನ್ಮೂಲಗಳ ಕೊರತೆ ಹಾಗು ಹೆಚ್ಚು ನಿರ್ವಹಣಾ ವೆಚ್ಚದಿಂದ ತತ್ತರಿಸುತ್ತಿರುವ ಸಣ್ಣ ಬ್ಯಾಂಕುಗಳ ಭವಿಷ್ಯ ಆತಂಕದಿಂದ ಕೂಡಿದೆ. [ಮುಂದಿನ ಪುಟಕ್ಕೆ]

---

# ಬ್ಯಾಂಕುಗಳಲ್ಲಿ ದೂರುಗಳ ನಿರ್ವಹಣೆ ಮತ್ತು ತ್ವರಿತಕ್ರಮದ ಮಹತ್ವ

[9ನೇ ಪುಟದಿಂದ ಮುಂದುವರಿದಿದೆ]

ಸಮಸ್ಯೆಗಳನ್ನು ಪರಿಹರಿಸುತ್ತಾರೆ. ತ್ರೈಮಾಸಿಕ ಗ್ರಾಹಕರ ಸಂಪರ್ಕ ಕಾರ್ಯಕ್ರಮಗಳೂ, ಜೊತೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳೂ ಗ್ರಾಹಕರನ್ನು ಬ್ಯಾಂಕಿನ ಕಡೆಗೆ ಸೆಳೆಯುತ್ತವೆ. ಇಂಥ ಸಭೆ, ಸಮಿತಿಗಳು ವ್ಯವಸ್ಥಿತವಾಗಿ ಕೆಲಸ ನಿರ್ವಹಿಸಿದರೆ ಗ್ರಾಹಕಸೇವೆ ದೂರುಗಳಿಂದ ದೂರವಿರುತ್ತದೆ,

ಪ್ರತಿಯೊಬ್ಬ ಗುಮಾಸ್ತನಿಗೂ, ಆಡಳಿತವರ್ಗದವರಿಗೂ ತರಬೇತಿ ಬಹು ಅವಶ್ಯಕವಾಗಿದೆ. ಅವನ ಕಾರ್ಯಚತುರತೆ, ನೈಪುಣ್ಯಗಳನ್ನು ಹೆಚ್ಚಿಸಿಕೊಳ್ಳಲು ತರಬೇತಿಗಳು ಬಹಳವಾಗಿ ಸಹಾಯವಾಗುತ್ತವೆ. ಶಾಖೆಗಳಲ್ಲಿಯೂ ಸಹ ಪ್ರತಿಯೊಬ್ಬ ಉದ್ಯೋಗಿಗೂ ಪ್ರತಿಯೊಂದು ವಿಭಾಗದಲ್ಲಿಯೂ — ಕೆಲಸ ಮಾಡಲು ಅವಕಾಶವಿತ್ತರೆ. ಅದೂ ಒಂದು ರೀತಿಯ ತರಬೇತಿಯಾಗುತ್ತದೆ. ಬ್ಯಾಂಕಿನ ಎಲ್ಲಾ ಕೆಲಸಗಳನ್ನೂ ಅರಿತಿದ್ದರೆ ಗ್ರಾಹಕ ಬಂದಾಗ ಮತ್ತೊಬ್ಬರ ಕಡೆ ತೋರಿಸದೆ, ಅವರ ಕೈಕಾಯದೆ, ಗ್ರಾಹಕನ ಕೆಲಸವನ್ನು ತಾನೇ ಮಾಡಿಕೊಟ್ಟು ಅವನ ಇಂಗಿತವನ್ನು ಪೂರೈಸಬಹುದು.

ಇದರೊಂದಿಗೆ ಸಮುದಾಯದ ಭಾಷೆಯಲ್ಲಿ ಅಂದರೆ ಅಲ್ಲಿಯ ಜನಗಳ ಆಡುಭಾಷೆಯಲ್ಲಿ ಗ್ರಾಹಕನೊಂದಿಗೆ ವ್ಯವಹಾರ ನಡೆಸುವುದು ಬಹಳ ಮುಖ್ಯ. ಇದರಿಂದ ಗ್ರಾಹಕನ ಸಮಸ್ಯೆಗಳನ್ನೂ, ಅವಶ್ಯಕತೆಗಳನ್ನೂ ಸರಿಯಾಗಿ ತಿಳಿದು, ಉಚಿತವಾದಂತಹ ಸಲಹೆ, ಸೇವೆಗಳನ್ನು ಒದಗಿಸಿಕೊಡಲು ಸಾಧ್ಯವಾಗುತ್ತದೆ. ಬ್ಯಾಂಕರನು ಸಮುದಾಯದ ಭಾಷೆಯನ್ನು ಚೆನ್ನಾಗಿ ಅರಿತಿರಬೇಕು. ಆಭಾಸಗಳಾಗದಂತೆ ಎಚ್ಚರಿಕೆ ವಹಿಸಬೇಕು.

ಹೀಗೆ ಗ್ರಾಹಕನಿಗೆ ಮನೆಗೆ ಬಂದ ಅತಿಥಿಯಂತೆ ಸೇವಾ ಸೌಲಭ್ಯಗಳನ್ನು ಒದಗಿಸಿಕೊಟ್ಟರೆ, ಗ್ರಾಹಕನೂ 'ಉದ್ಧಾರವಾಗಲಿ, ಬ್ಯಾಂಕಿನ ಸಮಸ್ತರೂ ಸುಖಿಗಳಾಗಲಿ' ಎಂದು ಹಾರೈಸುತ್ತಾನೆ. ಈ ತ್ವರಿತ ಕ್ರಮಗಳಿಂದ ದೂರುಗಳನ್ನು ಸಂಪೂರ್ಣವಾಗಿ ನಿವಾರಿಸಲು ಸಾಧ್ಯವಾಗದಿದ್ದರೂ, ಕಡಿಮೆ ಮಾಡಲಂತೂ ಸಾಧ್ಯವಿದೆ. ●

ಸಹಕಾರಿ ಬ್ಯಾಂಕುಗಳು ಬಡ್ಡಿ ನಿಯಂತ್ರಣದಿಂದ ಹೊರಗುಳಿಯುವುದರಿಂದ ಹಾಗು ಅವುಗಳ ಹೆಚ್ಚು ಬಡ್ಡಿ (ಠೇವಣಿಗೆ) ಹಾಗು ಕಡಿಮೆ ಬಡ್ಡಿ (ಸಾಲಕ್ಕೆ) ಆಕರ್ಷಣೆಯಿಂದ ನಮ್ಮ ಹಳ್ಳಿಯ ಶಾಖೆಗಳ ಮೇಲೆ ನೇರ ಪರಿಣಾಮವಾಗುತ್ತದೆ. ಠೇವಣಿದಾರ ಮತ್ತು ಸಾಲಗಾರ ಇಬ್ಬರೂ ತಮ್ಮ ವಹಿವಾಟನ್ನು ಸಹಕಾರಿ ಬ್ಯಾಂಕಿಗೆ ವರ್ಗಾಯಿಸಬಹುದು. ಇದರ ಹಿಂದೆ ಮಸಲತ್ತು ಏನಾದರೂ ಇದೆಯೋ ಎನ್ನುವ ಸಂಶಯ. ಹಳ್ಳಿಯ ಶಾಖೆಗಳನ್ನು ಮುಚ್ಚುವುದು ಸಾಧ್ಯವಾಗದೆ ಇರುವುದರಿಂದ ಪರೋಕ್ಷವಾದ ಈ ಕ್ರಮಗಳಿಂದ ಕಾಲಕ್ರಮೇಣ ಅದನ್ನ ಅರ್ಥ ಸಾಧ್ಯತೆಯಿಲ್ಲದ್ದಾಗಿಸಿ ಮುಚ್ಚಬಹುದೆಂಬ ಅನುಮಾನ. ಒಂದು ಕಡೆ ಠೇವಣಿಗಳಿಲ್ಲ. ಇನ್ನೊಂದು ಕಡೆ ಆದಾಯ ಮಾನ್ಯತೆಯಡಿಯಲ್ಲಿ ನಿಷ್ಕ್ರಿಯ ಸಾಲಗಳಿಗೆ ಮೀಸಲೂ ತೆಗೆದಿರಿಸುವಿಕೆಯಿಂದಾಗಿ ಹಳ್ಳಿಯ ಶಾಖೆಗೆ ಲಾಭ ಸ್ಥಿತಿ ಕನಸೇ ಆಗಿಬಿಡುತ್ತದೆ.

ಸಂಗಮ ಬ್ಯಾಂಕ್ ಸಾಲಗಳಲ್ಲಿ ಅಗ್ರಬ್ಯಾಂಕ್ ನಿರ್ಧರಿಸಿದ ಬಡ್ಡಿ ದರವನ್ನೇ ಇನ್ನಿತರ ಬ್ಯಾಂಕುಗಳೂ ಅನುಸರಿಸಬೇಕು. ಇದರಿಂದ ಸಣ್ಣ ಪಾಲುದಾರ ಬ್ಯಾಂಕುಗಳಿಗೆ ನಷ್ಟ. ಇಲ್ಲವಾದರೆ ಸಂಗಮದಿಂದ ಹೊರಗುಳಿಯಬೇಕು. ಈ ಸಂದರ್ಭದಲ್ಲಿ ಹೊಸ ಯೋಜನೆ ಚಾಲನೆಯಾಗಬಹುದು. ಕೆಲವು ಬ್ಯಾಂಕುಗಳು ಸಣ್ಣ ಬ್ಯಾಂಕುಗಳ ಒಳ್ಳೆಯ ಖಾತೆಗಳನ್ನು ವಹಿಸಿಕೊಂಡು ಅವಕ್ಕೆ ಕಮಿಷನ್ ಪಾವತಿ ಮಾಡಿ ತಾನು ಬಡ್ಡಿ ಸಂಪಾದಿಸಬಹುದು ಮತ್ತು ಈ ಸಾಲಕ್ಕೆ ಮೊದಲ ಬ್ಯಾಂಕಿನ ಖಾತರಿ ಇದ್ದೇ ಇರುತ್ತದೆ. ಆದರೆ ಇದು ಕಾದು ನೋಡಬೇಕಾದ ವ್ಯವಹಾರ.

### 2 ರೂ. 25,000ದ ವರೆಗಿನ ಹಾಗು 2 ಲಕ್ಷದ ವರೆಗಿನ ಸಾಲದ ಮೇಲಿನ ಬಡ್ಡಿ ದರ

ವ್ಯಾವಹಾರಿಕವಾಗಿ ಸಣ್ಣ ಸಾಲಗಾರರ ರಕ್ಷಣೆ ಆರ್ಥಿಕ ಸಮಾನತೆಯ ದೃಷ್ಟಿಯಿಂದ ಅತ್ಯಗತ್ಯ. ಇದರ ಮುಂದುವರಿಕೆ ಸ್ವಾಗತಾರ್ಹ ಕ್ರಮ.

### 3 ಉಳಿತಾಯ ಖಾತೆಗೆ ಬಡ್ಡಿ ದರ ಇಳಿತ

ಭಾರತೀಯ ಬ್ಯಾಂಕುಗಳ ಒಟ್ಟು ಠೇವಣಿಯ ಶೇ. 25ರಷ್ಟಿರುವುದು ಉಳಿತಾಯ ಖಾತೆಯಲ್ಲಿರುವ ದುಡ್ಡು. ಬಡ್ಡಿ ಕಡಿಮೆಯಾಗಿರುವುದರಿಂದ. ಕ್ರಮೇಣ ನಿಶ್ಚಿತ ಠೇವಣಿಗಳ ಕಡೆ ಹರಿಯಬಹುದು. ಅಥವಾ ಬಂಡವಾಳ ಮಾರುಕಟ್ಟೆಯ ಕಡೆ ತಿರುಗಬಹುದು. ಇದರಿಂದ ಬಡ್ಡಿಯ ಖರ್ಚು ಹೆಚ್ಚಿ ಬ್ಯಾಂಕಿನ ಲಾಭದ ಮೇಲೆ ಪರಿಣಾಮವಾಗಬಹುದು.

### 4 ಅನಿವಾಸಿ ಖಾತೆಗಳಲ್ಲಿ ತಂದ ಬದಲಾವಣೆ

ವಿದೇಶಿ ವಿನಿಮಯದ ಪರಿಸ್ಥಿತಿ ಆಶಾದಾಯಕವಾಗಿರುವುದರಿಂದ ಹಾಗು ನಮ್ಮ ಅನಿವಾಸಿ 'ಗಾಳಿ ಸ್ನೇಹಿತರಿಂದ' ದೂರ ಉಳಿಯಲು ಅಥವಾ ನಿಯಂತ್ರಿಸಲು ತಂದ ಕ್ರಮ ಅನಿವಾಸಿ ಖಾತೆಗಳ ಮೇಲೆ ನಗದು ಮೀಸಲು ಜಾರಿ (ಶೇ. 7.5). ಇದರಿಂದ ಬ್ಯಾಂಕಿಗೆ ರೂ. 550 ಕೋಟಿ ನಷ್ಟ. ಇದರ ಪರಿಣಾಮ ಕಾದು ನೋಡಬೇಕು. ಬ್ಯಾಂಕುಗಳು ದರವ್ಯತ್ಯಯವನ್ನು ತಾವೆ ಭರಿಸಬೇಕಾಗಿರುವುದರಿಂದ ಇನ್ನು ಮೇಲೆ ವಿದೇಶಿ ಚಲಾರ್ಥ ಅನಿವಾಸಿ ಠೇವಣಿಗಳಿಗೆ ಬ್ಯಾಂಕುಗಳು ಪ್ರೋತ್ಸಾಹ ಕೊಡಲಾರವು.

### 5 ಪರಿನಿಯಮಿತ ದ್ರವತ್ವದಲ್ಲಿ ಕಡಿತ

ಈ ಮೇಲಿನ ಕ್ರಮದಿಂದಾಗಿ 2.800 ರೂ.ಗಳಷ್ಟು ಹೆಚ್ಚು ಹಣದ ಬಿಡುಗಡೆಯಾಗುತ್ತದೆ. ಆದರೆ ಇದರಿಂದ ಬ್ಯಾಂಕುಗಳಿಗೆ ಅದರಿಂದ ಬರುತ್ತಿದ್ದ ಬಡ್ಡಿಯಲ್ಲಿ 56 ರೂ. ಕಡಿಮೆಯಾಗುತ್ತದೆ. ಈಗಾಗಲೆ ದ್ರವತ್ವದಿಂದ ನರಳುತ್ತಿರುವ ಬ್ಯಾಂಕುಗಳಿಗೆ ಏನು ಮಾಡಬೇಕೆಂದು ತಿಳಿಯದಾಗಿದೆ. ಇದರಿಂದಾಗಿ ಹೆಚ್ಚು ಬ್ಯಾಂಕುಗಳು ಸರ್ಕಾರಿ ಹುಂಡಿಗಳಲ್ಲಿ ಹಾಗು ವಿನಿಯೋಜನೆಗಳಲ್ಲಿ ಅಗಾಧ ಹಣ ಹೂಡಿವೆ. ಅದರಿಂದ ಬರುವ ಬಡ್ಡಿ ಹೆಚ್ಚು ಕಡಿಮೆ ಅದರ ಸಾಲದ ಮೇಲಿನ ಬಡ್ಡಿ ಆದಾಯದ ಶೇ. 60ರಿಂದ 70ರಷ್ಟಾಗಿದೆ. ಇದು ಆರೋಗ್ಯಕರ ಕ್ರಮವಲ್ಲ. ಇದರಿಂದ ಕೈಗಾರಿಕೆ, ಕೃಷಿಯ ಧನ ಪೋಷಣೆ ಕಡಿಮೆಯಾಗುತ್ತದೆ. ಹಾಗು ಒಟ್ಟುದೇಶೀಯ ಉತ್ಪನ್ನದ ಮೇಲೆ ಹೊಡೆತ ಬೀಳುತ್ತದೆ. ಈ ಬದಲಾವಣೆಗೆ ಕಾರಣಗಳು ಸ್ಪಷ್ಟ. ಆದ್ಯತಾ ವಲಯಗಳ ಸಾಲದ ಮರುಪಾವತಿಯಲ್ಲ. ರೋಗಗ್ರಸ್ತ ಉದ್ಯಮಗಳ ನಿಷ್ಕ್ರಿಯ ಸಾಲ ಹಾಗು ಅದಕ್ಕಾಗಿ ಬ್ಯಾಂಕು ತೆರಬೇಕಾದ ಮೀಸಲು (ಆದಾಯ ಮಾನ್ಯತೆಯಡಿಯಲ್ಲಿ) ಹಾಗು ಬಂಡವಾಳ ಪರ್ಯಾಪ್ತತೆ ಮುಟ್ಟಲೇಬೇಕಾದ ಅನಿವಾರ್ಯತೆ. ಇದರ ಪೂರ್ಣ ಚಿತ್ರ ಬಹುಶಃ ಮುಂದಿನ ವರುಷ ಕಾಣಬಹುದು.

### 6 ನಗದು ಮೀಸಲು ನಿರ್ವಹಣೆಯಲ್ಲಿ ಬದಲಾವಣೆ

ಬ್ಯಾಂಕು ಇದುವರೆವಿಗೂ ನಗದು ಮೀಸಲಿಗೆ ಕಡೆಯ ಶುಕ್ರವಾರದ ಶಿಲ್ಕಿನ ಆಧಾರದ ಮೇಲೆ ಅನುಪಾತವನ್ನು ನಿರ್ವಹಿಸುತ್ತಿತ್ತು. ಹಾಗು ಅದಕ್ಕೆ ಹೊಂದಾಣಿಕೆಗೆ ಅಸ್ಪದವಿತ್ತು. ಇದರ ಕಾರಣ 'ಕರೆಹಣ' ಕೆಲವೊಮ್ಮೆ ಸುಲಭೋಪಾಯವಾಗಿ ಪರಿಣಮಿಸುತ್ತಿತ್ತು. ಅದಕ್ಕಾಗಿ ಈಗ ಅದು 13 ದಿನಗಳವರೆಗೆ ಅನುಪಾತವನ್ನು ಕಡ್ಡಾಯವಾಗಿ ನಿರ್ವಹಿಸಿ 14ನೆಯ ದಿನ ಹೊಂದಾವಣಿಕೆ ಮಾಡಿಕೊಳ್ಳಬೇಕಾದುದರಿಂದ ಸಟ್ಟಾ ವ್ಯಾಪಾರಕ್ಕೆ (ಕರೆಹಣದ) ಕಡಿವಾಣವಾಗಿ ಪರಿಣಮಿಸಿದೆ.

### 7 ವಾಣಿಜ್ಯ ಪತ್ರಗಳ ಪರ್ಯಾಯ ವ್ಯವಸ್ಥೆ ರದ್ದು

ಇದುವರೆವಿಗೂ ಒಂದು ಆಧಾರವಿಲ್ಲದ ಸಾಲ ಆಧಾರವುಳ್ಳ ಸಾಲವಾಗಿದ್ದ ತಪ್ಪನ್ನು ಸರಿಪಡಿಸಲಾಗಿದೆ. ಅಂದರೆ ನಿಗಮಗಳು ತಮ್ಮ ನಗದು ಸಾಲದ ಒಂದು ಮಿತಿಯನ್ನು ವಾಣಿಜ್ಯ ಪತ್ರವನ್ನಾಗಿ ಪರಿವರ್ತಿಸಿ, ವ್ಯವಹರಿಸಿ ಆಮೇಲೆ ಅದು ಬಿಕರಿಯಾಗ

ದಿದ್ದಾಗ ಅದನ್ನ ಹಿಂದಿರುಗಿಸಿ ತನ್ನ ಸಾಲವನ್ನ ಮೊದಲ ಮಿತಿಗೆ ಹೆಚ್ಚಿಸಿಕೊಳ್ಳಬಹುದಾಗಿತ್ತು. ಈ ವಹಿವಾಟಿನಲ್ಲಿ ಯಾವುದೇ ಆಧಾರವಿಲ್ಲದ ವಾಣಿಜ್ಯ ಪತ್ರ ನಗದು ಸಾಲಕ್ಕೆ ಲಭ್ಯವಿದ್ದ ಆಧಾರ ಗಳಿಂದಾಗಿ ಆಧಾರವುಳ್ಳ ಸಾಲವಾಗಿತ್ತು. ಆದರೆ ಈ ಹೊಸ ನೀತಿ ಯಿಂದಾಗಿ ನಿಗಮ ಮೊದಲ ಮಿತಿ ಪಡೆಯಬೇಕಾದಲ್ಲಿ ಮತ್ತೆ ಮೊದಲಿನಿಂದ ಬ್ಯಾಂಕಿನ ಜೊತೆಗೆ ಪ್ರಕ್ರಿಯೆ ಪ್ರಾರಂಭಿಸಬೇಕು. ಇದರ ಪರಿಣಾಮ ನಿಗಮಗಳು ಹೆಚ್ಚು ಜಾಗರೂಕವಾಗಿ ವ್ಯವಹರಿಸುವುದು ಅನಿವಾರ್ಯವಾಗುತ್ತದೆ. ಇದು ಒಂದು ಒಳ್ಳೆಯ ಕ್ರಮ.

### 8 ಕೃಷಿಗೆ ನಗದು ಸಾಲ ಸೌಲಭ್ಯ

ಇದುವರೆವಿಗೂ 'ಕೃಷಿ ನಗದು ಸಾಲ' ಹೆಸರಿನಲ್ಲಿತ್ತು. ಆದರೆ ನಗದು ಸಾಲದ ಖಾತೆಯ ಸೌಲಭ್ಯಗಳಿರಲಿಲ್ಲ. ರೈತನಿಗೆ ಇತರ ಆದಾಯವಿದ್ದಲ್ಲಿ ಅಥವಾ ಹೆಚ್ಚು ಹಣವಿದ್ದಲ್ಲಿ ಜಮಾಮಾಡಿ ಮತ್ತೆ ಬೇಕಾದಾಗ ವಾಪಸು ಪಡೆಯಬಹುದು. ತಾನು ಕೊಡುವ ಬಡ್ಡಿಯನ್ನು ನಿಯಂತ್ರಿಸಬಹುದು ಹಾಗು ಪ್ರತಿ ವರುಷ ಪುನರಾವರ್ತಿಸಬಹುದು. ಇದೊಂದು ಅಭೂತಪೂರ್ವ ಹೆಜ್ಜೆ.

### 9 ಅವಧಿ ಸಾಲದ ಮಿತಿ ಏರಿಕೆ

ಅವಧಿ ಸಾಲ ನೀಡುತ್ತಿದ್ದ ಸಂಸ್ಥೆಗಳು ನಗದು ಸಾಲ ನೀಡಲು ಅವಕಾಶ ನೀಡುವುದರಿಂದ ಒಂದೇ ಕಡೆ ಸಾಲ ಪಡೆಯಲು ಅನಂಕೂಲ.

### 10 ನೇರ ಗೃಹ ಸಾಲದಲ್ಲಿ ಹೆಚ್ಚಳ

ಬದಲಾಗುತ್ತಿರುವ ಗ್ರಾಹಕನ ಅವಶ್ಯಕತೆಗಳಿಗನುಗುಣವಾಗಿ ಹಾಗು ವಸತಿ ಸಮಸ್ಯೆಯನ್ನು ಕಡಿಮೆ ಮಾಡುವ ಸಲುವಾಗಿ ತಂದ ಕ್ರಮ. ಗ್ರಾಹಕನ ಮಾರುಕಟ್ಟೆಯ ಮೆಲೆ ಕಣ್ಣಿಟ್ಟಿರುವ ಒಂದು ಯೋಜನೆ.

### 11 ನಿಷ್ಕ್ರಿಯ ಸಾಲಗಳ ಮೇಲಿನ ಮೀಸಲು ಹೆಚ್ಚಳ

ಬ್ಯಾಂಕುಗಳ ಆರೋಗ್ಯ ದೃಷ್ಟಿಯಿಂದ ಈ ಕ್ರಮ ಬರಬಹುದಾದರೂ ಗ್ರಾಮೀಣ ಶಾಖೆಗಳೇ ಹೆಚ್ಚಾಗಿರುವ ಬ್ಯಾಂಕುಗಳ ಮೇಲೆ ಪರಿಣಾಮ ಬೀರುತ್ತದೆ. ಇದು ಕೃಷಿ ಸಾಲ ನೀಡುವಿಕೆಯ ಮೇಲೆ ಪರಿಣಾಮ ಬೀರಬಹುದು. ಆದರೆ ಶೇ. 15ರ ಮಟ್ಟವನ್ನು ಕೃಷಿ ಸಾಲದಲ್ಲಿ ಮುಟ್ಟಲೇಬೇಕಾದ ಅನಿವಾರ್ಯತೆಯಿಂದ ಅಷ್ಟರವಟ್ಟಿಗೆ ಬ್ಯಾಂಕುಗಳ ಸಾಲ ನೀಡಲೇಬೇಕು.

### 12 ಠೇವಣಿ ಸಾಲದ ಮೇಲೆ 'ಅಂತರ' ಆಯಾ ಬ್ಯಾಂಕುಗಳ ನಿರ್ಧಾರಕ್ಕೆ

ಇದರ ಉದ್ದೇಶ ಅರ್ಥವಾಗುತ್ತಿಲ್ಲ. ಕಾರಣ ಪ್ರತಿ ನೂರು ರೂಪಾಯಿಗಳ ಠೇವಣಿಯಲ್ಲಿ ಶೇ. 31.5ರಷ್ಟು ಎಸ್. ಎಲ್. ಆರ್. ಶೇ. 14 ಸಿ.ಆರ್.ಆರ್.ನಲ್ಲಿ ತೊಡಗಿಸಬೇಕಾಗುವುದರಿಂದ, ಬಾಕಿ ಉಳಿಯುವ ಹಣ ಶೇ. 55. ಆದರೆ ಠೇವಣಿ ಪೂರ್ತಿಯಷ್ಟೆ ಸಾಲ ಕೊಡಬೇಕಾದರೆ ಬ್ಯಾಂಕು ಬೇರೆ ಕಡೆಯಿಂದ ಹಣ ತರಬೇಕು. ಇದರ ಲಾಭಪ್ರದತೆಯ ಬಗ್ಗೆ ಹೆಚ್ಚು ಚರ್ಚೆಯಾಗುವುದು ಒಳಿತೆಂದು ಕಾಣುತ್ತದೆ.

### 13 ಉಪರಫ್ತುದಾರರಿಗೆ ರಫ್ತು ಸೌಲಭ್ಯ

ಬ್ಯಾಂಕುಗಳು ಇದನ್ನು ಗುರುತಿಸುವುದು ಕಷ್ಟ. ಇದರ ಪೂರ್ಣ ವಿವರವಿಲ್ಲದಿರುವುದರಿಂದ ಪರಿಣಾಮ ತೀರ್ಮಾನಿಸಲು ಕಷ್ಟ.

ಡಾ. ರಂಗರಾಜನ್‌ರವರ ಹೆಸರಿಗೆ ಪ್ರತಿಷ್ಠೆಯನ್ನು ತಂದಿರುವ ಈ ಸಾರಿಯ ಉದರಿ ನೀತಿಯ ಬಗ್ಗೆ ಒಡಕು ಮಾತು ಇಲ್ಲದಿಲ್ಲ. ಅನಿವಾಸಿ ಖಾತೆಯ ಮೇಲೆ ಮೀಸಲು ಬೇಕಿರಲಿಲ್ಲ, ಠೇವಣಿ ಮೇಲಿನ ಬಡ್ಡಿಯನ್ನು ನಿಯಂತ್ರಣದ ಹೊರಗಿಡಬೇಕಿತ್ತು— ಇತ್ಯಾದಿ. ಆದರೆ ಈ ನೀತಿಯ ಫಲಿತಾಂಶ ಭವಿಷ್ಯದಲ್ಲಿರುವುದರಿಂದ ಈಗಲೇ ಏನೂ ಹೇಳುವುದು ಕಷ್ಟ. ●

---



---

# ಸಣ್ಣ ಕೈಗಾರಿಕೆಗಳ ತಾಂತ್ರಿಕ ಸಲಹಾಕೋಶಗಳು

**ಸಿ. ಎಸ್. ಸರ್ವಮಂಗಳ**
ಕನ್ನಡ ಬಳಗ, ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು, ಬೆಂಗಳೂರು

ನಮ್ಮ ಅರ್ಥವ್ಯವಸ್ಥೆಯಲ್ಲಿ ಸಣ್ಣ ಕೈಗಾರಿಕೆಗಳಿಗೆ ವಿಶೇಷ ಮಹತ್ವವಿದೆ ಎಂಬುದು ನಿರ್ವಿವಾದ. ಆದರೆ ಈ ಕ್ಷೇತ್ರದಲ್ಲಿ ಹೆಚ್ಚಾಗಿ ಅಸ್ವಸ್ಥತೆಗೆ ಒಳಗಾಗುವ ಪ್ರವೃತ್ತಿಯಿದೆಯೆಂಬುದೂ ನಿಜ. ತನ್ನ ಸಾಂಪ್ರದಾಯಿಕ ಪಾತ್ರವನ್ನು ಮೀರಿ ಬೆಳೆಯುತ್ತಿರುವ ಬ್ಯಾಂಕು ಈ ಕ್ಷೇತ್ರದ ಆರೋಗ್ಯಕ್ಕಾಗಿ ಹೆಚ್ಚು ಆಸ್ಥೆ ವಹಿಸುತ್ತಿದೆ.

ತಾಂತ್ರಿಕ ಸಲಹಾಕೋಶಗಳ ಪರಿಕಲ್ಪನೆ ಹುಟ್ಟಿಕೊಂಡ ಹಿನ್ನೆಲೆಯನ್ನು ಹೀಗೆ ಅರ್ಥೈಸಬಹುದು. ಸಣ್ಣ ಕೈಗಾರಿಕಾ ವಲಯದಲ್ಲಿ ಬ್ಯಾಂಕುಗಳ ಕಾರ್ಯಾಚರಣೆ ವಿಸ್ತಾರಗೊಂಡ ಹಾಗೆಲ್ಲಾ ತಾವು ಒಳಗೊಂಡ ಘಟಕಗಳೊಂದಿಗೆ ಹೆಚ್ಚಿನ ರೀತಿಯಲ್ಲಿ ಸ್ಪಂದಿಸಬೇಕಾದ ಅಗತ್ಯವನ್ನು ಬ್ಯಾಂಕುಗಳು ಮನಗಂಡವು. ಸಣ್ಣ ಕೈಗಾರಿಕಾ ವಲಯಕ್ಕೆ ವಿಸ್ತರಿಸಬೇಕಾದ ಸಾಲ ನೀಡಿಕೆಯಲ್ಲಿ ಗುಣಾತ್ಮಕತೆಯನ್ನು ಕಾಯ್ದುಕೊಳ್ಳುವ ಮತ್ತು ಆ ಮೂಲಕ ಬ್ಯಾಂಕಿನ ಹಿತಾಸಕ್ತಿಯನ್ನು ಕಾಯ್ದುಕೊಳ್ಳುವ ಉದ್ದೇಶವೂ ಇದರೊಂದಿಗೆ ಮೇಳೈಸಿತು. ಸಾಲನೀಡಿಕೆಯ ಕಾರ್ಯಾಚರಣೆಯಲ್ಲಿ ನಿರತರಾದ ಅಧಿಕಾರಿಗಳಿಗೆ ಮೌಲ್ಯನಿರ್ಧಾರಣ, ಉಸ್ತುವಾರಿ ಮತ್ತು ಅನುಸರಣೆಯ ಕೌಶಲಗಳು ಮಾತ್ರವೇ ಸಾಲದು. ಸಣ್ಣ ಕೈಗಾರಿಕಾ ವಲಯಕ್ಕೆ ವಿಶಿಷ್ಟವಾದ ಸಮಸ್ಯೆಗಳ, ಸವಾಲುಗಳ ಸ್ವರೂಪದ ಬಗ್ಗೆಯೂ ತಿಳಿವಳಿಕೆಯಿರಬೇಕು ಎಂಬ ಅಂಶವನ್ನು ಗುರುತಿಸಲಾಯಿತು. ಇದರ ಜೊತೆಗೇ ವ್ಯವಸ್ಥಾಪನ ವಿಜ್ಞಾನವನ್ನು ಸಣ್ಣ ಕೈಗಾರಿಕಾ ಸಮಸ್ಯೆಗಳಿಗೆ ಅನ್ವಯಿಸಿ ಪರಿಹಾರ ಕಂಡುಕೊಳ್ಳುವ ಪ್ರವೃತ್ತಿಯೂ ಬೆಳೆಯತೊಡಗಿತು. 60ರ ದಶಕದ ಕೊನೆಕೊನೆಗೆ ಮತ್ತು 70ರ ದಶಕದ ಪ್ರಾರಂಭದ ವರ್ಷಗಳಲ್ಲಿ ಬ್ಯಾಂಕುಗಳ ಸಾಮಾಜಿಕ ಉದ್ದೇಶಗಳು ಬದಲಾದಂತೆ ಸಣ್ಣ ಕೈಗಾರಿಕೆಗಳಿಗೆ ವಿಶೇಷ ಒತ್ತು ನೀಡುವಂಥ ಪರಿಸರವೇರ್ಪಟ್ಟಿತು. ಈ ಘಟ್ಟದಲ್ಲಿ ಸಣ್ಣ ಕೈಗಾರಿಕಾ ವಲಯದ ಪ್ರಧಾನ ಧನಪೋಷಕ ಸಂಸ್ಥೆಯಾದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಈ ವಲಯವು ಹೆಚ್ಚಿನ ಮಟ್ಟದಲ್ಲಿ ಅಸ್ವಸ್ಥತೆಗೆ ಒಳಗಾಗುವ ಪ್ರವೃತ್ತಿ ಹೊಂದಿದೆ ಎಂಬ ಅಂಶವನ್ನು ಗುರುತಿಸಿದ್ದೇ ಅಲ್ಲದೆ, ಬ್ಯಾಂಕಿಂಗ್ ಸಂಸ್ಥೆಯೊಂದು ತನ್ನ ಸಾಂಪ್ರದಾಯಿಕ ಪಾತ್ರವನ್ನು ಮೀರಿ ಬೆಳೆಯಬೇಕಾದ ಅಗತ್ಯವನ್ನೂ ಮನಗಂಡಿತು. ಧನಪೋಷಕ ಸಂಸ್ಥೆಯಾಗಿರುವುದರ ಜೊತೆಗೇ ತನ್ನ ಗ್ರಾಹಕ ಘಟಕದ ಬೆಳವಣಿಗೆಯಲ್ಲಿ ಆಸಕ್ತಿ ವಹಿಸಿ, ಅದರ ಕಾರ್ಯಾಚರಣೆಯ ಕ್ಷೇತ್ರದಲ್ಲಿ ಹೆಚ್ಚಿನ ರೀತಿಯಲ್ಲಿ ಭಾಗವಹಿಸುವುದರಿಂದ ಲಾಭವಿದೆ ಎಂಬುದನ್ನು ಗುರುತಿಸಿ ಕಾರ್ಯಪ್ರವೃತ್ತವಾಯಿತು.

**ಉದ್ದೇಶಗಳು**

ಈ ಬಗೆಯ ಚಿಂತನೆಯ ಫಲವಾಗಿ ಗ್ರಾಹಕ ಘಟಕಗಳಿಗೆ ವ್ಯವಸ್ಥಾಪನ ಹೂಡುವಳಿಗಳನ್ನು ಒದಗಿಸುವ ಸಲುವಾಗಿ 1973–1974ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಗಳಲ್ಲೆಲ್ಲ ಸಲಹಾಕೋಶಗಳನ್ನು ಸ್ಥಾಪಿಸಲಾಯಿತು. ಸಲಹಾಕೋಶಗಳನ್ನು ಬೆಳೆಸುವ ನಿಟ್ಟಿನಲ್ಲಿ, ಮೂರು ಮುಖ್ಯ ಉದ್ದೇಶಗಳನ್ನು ಆ ಸಂದರ್ಭದಲ್ಲಿ ಗುರುತಿಸಲಾಗಿತ್ತು:

1 ಸಣ್ಣ ಕೈಗಾರಿಕಾ ಘಟಕಗಳ ಒಟ್ಟಾರೆ ಲಾಭಪ್ರದತೆಯನ್ನು ಹೆಚ್ಚಿಸಲು ಮತ್ತು ಕ್ರಮಬದ್ಧವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವಂತೆ ವ್ಯವಸ್ಥಾಪನ ಹೂಡುವಳಿ ಒದಗಿಸುವುದು.

2 ಸಣ್ಣ ಕೈಗಾರಿಕಾ ವಿಭಾಗಕ್ಕೆ ಸಾಲನೀಡುವ ಬ್ಯಾಂಕಿನ ಕಾರ್ಯಾಚರಣೆಗಳ ವಿಭಾಗಕ್ಕೆ ನೆರವು ನೀಡುವುದು—ಸಣ್ಣ ಕೈಗಾರಿಕಾ ಘಟಕವೊಂದರ ತಾಂತ್ರಿಕ, ವ್ಯವಸ್ಥಾಪನೆಯ ಮತ್ತು ಕಾರ್ಯನಿರ್ವಹಣೆಯ ಕೌಶಲ್ಯಗಳು ಹಾಗೂ ದೌರ್ಬಲ್ಯಗಳ ಮೌಲ್ಯನಿರ್ಧಾರಣ ನಡೆಸಿ, ಅವುಗಳನ್ನು ಹಣಕಾಸಿನ ಪರಿಭಾಷೆಗೆ ಪರಿವರ್ತಿಸಿಕೊಡುವ ಕಾರ್ಯದಲ್ಲಿ ತಾಂತ್ರಿಕ ಸಲಹಾಕೋಶ ತಯಾರಿಸಿಕೊಡುವ ವರದಿಗಳ ಉಪಯುಕ್ತತೆ ಅಡಗಿದೆ. ಅಲ್ಪಾವಧಿ ಮತ್ತು ದೀರ್ಘಾವಧಿ ಉದರಿ ನೀಡಿಕೆಯ ವಿಷಯದಲ್ಲಿ ನಿರ್ಧಾರಗಳನ್ನು ಕೈಗೊಳ್ಳಲು ಇಂತಹ ವರದಿಗಳಿಂದ ಅನುಕೂಲವಾಗುತ್ತದೆ.

3 ಸಣ್ಣ ಕೈಗಾರಿಕಾ ವಲಯಕ್ಕೆ ಸಾಲ ನೀಡುವ ವಿಷಯಕ್ಕೆ ಸಂಬಂಧಿಸಿದಂತೆ ಬ್ಯಾಂಕಿನಲ್ಲಿ ಲಭ್ಯವಿರುವ ಮಾನವ ಕೌಶಲಗಳ ಅಧೋರಚನೆಯನ್ನು ಉತ್ತಮಪಡಿಸುವುದು. ತಾಂತ್ರಿಕ ಸಲಹಾಕೋಶದಲ್ಲಿ ಸಮರ್ಥವಾಗಿ ಕಾರ್ಯನಿರ್ವಹಿಸಬಲ್ಲ ವಿಶೇಷ

ಅಧಿಕಾರಿಗಳ ನೇಮಕಾತಿ ಇಂತಹ ಯತ್ನಗಳಲ್ಲಿ ಒಂದಾಗಿತ್ತು. ಕೈಗಾರಿಕಾ ವ್ಯವಸ್ಥಾಪನೆ ಮತ್ತು ಸಂಬಂಧಿತ ಉದರಿ ಕ್ಷೇತ್ರಗಳಲ್ಲಿ ಪರಿಣತಿಹೊಂದಿದ ಅಧಿಕಾರಿಗಳನ್ನು ಆಯ್ಕೆ ಮಾಡಿಕೊಳ್ಳುವ ಪರಿಪಾಠವೂ ಬೆಳೆದುಬಂತು. ವ್ಯವಸ್ಥಾಪನೆ ಮತ್ತು ಉದರಿ ಮೌಲ್ಯನಿರ್ಧಾರಣ ಕ್ಷೇತ್ರಗಳಲ್ಲಿ ಕೊಂಚಮಟ್ಟಿನ ತಿಳಿವಳಿಕೆ/ಅನುಭವ ಹೊಂದಿದಂಥ ಗಣನೀಯ ಸಂಖ್ಯೆಯ ಕ್ಷೇತ್ರ ಸಿಬ್ಬಂದಿ ಮತ್ತು ಶಾಖಾ ಸಿಬ್ಬಂದಿಗೆ ಹೆಚ್ಚಿನ ತರಬೇತಿ ನೀಡುವುದೂ ಒಂದು ಮುಖ್ಯ ಕ್ರಮವಾಗಿತ್ತು. ಈ ಕ್ಷೇತ್ರದಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಬಲ್ಲ ನಿಯಂತ್ರಣ ಪ್ರಾಧಿಕಾರಿಗಳು ಮತ್ತು ಉನ್ನತ ಅಧಿಕಾರಿಗಳ ನೇಮಕಾತಿ ಇನ್ನೊಂದು ಮುಖ್ಯ ಯತ್ನವಾಗಿತ್ತು. ವಿಷಯಗ್ರಹಣ ಕಾರ್ಯಕ್ರಮಗಳು ಮತ್ತು ಪರ್ಯಾವರ್ತನ ಕಾರ್ಯಕ್ರಮಗಳ ಮೂಲಕ ಹಾಗೂ ಅನೌಪಚಾರಿಕ ವಿಚಾರ ವಿನಿಮಯದ ಮೂಲಕ ಸಣ್ಣ ಕೈಗಾರಿಕಾ ಹಣಕಾಸು ನೀಡಿಕೆ ಮತ್ತು ಮೌಲ್ಯನಿರ್ಧಾರಣಗಳನ್ನು ಕುರಿತಂತೆ ಈ ಅಧಿಕಾರಿಗಳಿಗೆ ತಿಳಿವಳಿಕೆ ನೀಡಲಾಗುತ್ತಿತ್ತು.

ಪ್ರಾರಂಭಿಕ ವರ್ಷಗಳಲ್ಲಿ ವಿವಿಧ ಸ್ಥಳೀಯ ಪ್ರಧಾನ ಕಛೇರಿಗಳಲ್ಲಿ, ಸ್ಥಳೀಯ ಅಗತ್ಯಗಳು ಮತ್ತು ಆದ್ಯತೆಗಳಿಗೆ ತಕ್ಕಂತೆ, ಆಯಾ ಉದ್ದೇಶಕ್ಕೆ ಹೆಚ್ಚಿನ ಒತ್ತು ಕೊಡಲಾಗುತ್ತಿತ್ತು. ಸಹವರ್ತಿ ಬ್ಯಾಂಕುಗಳಲ್ಲಿ ಸಲಹಾಕೋಶಗಳನ್ನು ಸ್ಥಾಪಿಸುವ ಸಂದರ್ಭದಲ್ಲಿಯೂ ಇದೇ ಬಗೆಯ ನೀತಿಯನ್ನು ಕಾಯ್ದುಕೊಳ್ಳಲಾಯಿತು. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ವಿಚಾರಧಾರೆಯನ್ನೇ ಅನುಸರಿಸಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ಸ್ಟೇಟ್ ಬ್ಯಾಂಕ್ ಆಫ್ ಬಿಕನೇರ್ ಅಂಡ್ ಜೈಪುರ್ ಮತ್ತು ಸ್ಟೇಟ್ ಬ್ಯಾಂಕ್ ಆಫ್ ಪಟಿಯಾಲಾಗಳಲ್ಲಿ ಸಲಹಾಕೋಶಗಳನ್ನು ಪ್ರಾರಂಭಿಸಲಾಯಿತು.

## ಮೈಸೂರು ಬ್ಯಾಂಕಿನಲ್ಲಿ

ಈ ಪ್ರಬಂಧದಲ್ಲಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಸಲಹಾಕೋಶದ ಅನುಭವವನ್ನು ಕೇಂದ್ರವಾಗಿಟ್ಟುಕೊಂಡು, ತಾಂತ್ರಿಕ ಸಲಹಾಕೋಶಗಳ ಕಾರ್ಯನಿರ್ವಹಣೆಯನ್ನು ಕುರಿತಂತೆ ಕೆಲವು ಸಾಮಾನ್ಯ ಅಂಶಗಳನ್ನು ಗುರುತಿಸುವ ಯತ್ನ ನನ್ನದು.

ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ತಾಂತ್ರಿಕ ಸಲಹಾಕೋಶವನ್ನು 1976ರಲ್ಲಿ ವರ್ಷನೇಯ ಸಮಿತಿ ಶಿಫಾರಸ್ಸುಗಳಿಗೆ ಅನುಗುಣವಾಗಿ ಸ್ಥಾಪಿಸಲಾಯಿತು. ಇದರ ಮುಖ್ಯ ಉದ್ದೇಶ ಸಣ್ಣ ಕೈಗಾರಿಕಾ ವಲಯದ ಸಾಲ ನೀಡಿಕೆಯಲ್ಲಿ ಗುಣಾತ್ಮಕತೆಯನ್ನು ಉತ್ತಮಪಡಿಸುವುದೇ ಆಗಿತ್ತು. ಪ್ರಾರಂಭದಲ್ಲಿ ಮೆಸರ್ಸ್ ಇಬ್‌ಕಾನ್ ಪ್ರೈವೇಟ್ ಲಿಮಿಟೆಡ್ ಎಂಬ ಬಾಹ್ಯ ಸಲಹಾ ಸಂಸ್ಥೆಯೊಂದರ ಸೇವೆಯನ್ನು ಬಳಸಿಕೊಂಡು ಪ್ರತಿವರ್ಷವೂ, ಆಯ್ದ ಕೆಲವು ಅಧಿಕಾರಿಗಳಿಗೆ ವಿಶೇಷ ತರಬೇತಿ ನೀಡುವ ವ್ಯವಸ್ಥೆಯಿತ್ತು. ಸುಮಾರು ಒಂದು ದಶಕದ ಕಾಲ ಈ ಸಂಸ್ಥೆಯ ಸೇವೆಗಳನ್ನು ಬಳಸಿಕೊಂಡು ಸಣ್ಣ ಕೈಗಾರಿಕೆಗಳ ವ್ಯವಸ್ಥಾಪನೆ ಮತ್ತು ಉದರಿ ಅಗತ್ಯಗಳ ನಿರ್ವಹಣೆಗೆ ಪ್ರಾಮುಖ್ಯ ನೀಡುವಂಥ ತರಬೇತಿಯನ್ನು ರೂಪಿಸಲಾಗಿತ್ತು, ಕೈಗಾರಿಕೆಯ ಆವರಣದಲ್ಲೇ ಪ್ರಾಯೋಗಿಕ ತರಬೇತಿಯನ್ನು ನೀಡುವಂಥ ಕಾರ್ಯಕ್ರಮ ಇದಾಗಿತ್ತು. ಕಾಲ ಮತ್ತು ಚಲನ ಅಧ್ಯಯನ, ಸಾಮರ್ಥ್ಯದ ಮೌಲ್ಯ ನಿರ್ಧಾರಣ, ಉತ್ಪಾದನೆಯ ಯೋಜನೆ ಮತ್ತು ನಿಯಂತ್ರಣ, ಸರಕು ನಿರ್ವಹಣೆ ವೆಚ್ಚ ನಿರ್ಣಯ. ಬೆಲೆನಿರ್ಧಾರಣ ಮತ್ತು ಉತ್ಪನ್ನ ಸಮತೋಲನ ಈ.ಬಗೆಯ ಪರಿಕಲ್ಪನೆಗಳನ್ನು ಒಳಗೊಂಡಂಥ ತರಬೇತಿಯಿದು. ಹೊಸ ಪರಿಯೋಜನೆಗಳ ಮೌಲ್ಯನಿರ್ಧಾರಣ, ದುಡಿಯುವ ಬಂಡವಾಳ ಅಗತ್ಯಗಳ ಮೌಲ್ಯಾಂಕನ, ಅಸ್ವಸ್ಥ ಸಣ್ಣ ಕೈಗಾರಿಕಾ ಘಟಕಗಳ ಅರ್ಥಸಾಧ್ಯತೆಯ ನಿರ್ಧಾರಣ, ತರಬೇತಿಯ ಕೇಂದ್ರ ಕಾಳಜಿಗಳಾಗಿದ್ದವು.

1986ರಿಂದ ಈಚೆಗೆ ಬಾಹ್ಯ ಸಲಹಾ ಸಂಸ್ಥೆಗಳ ಸೇವೆ ಪಡೆಯುವ ವ್ಯವಸ್ಥೆಯನ್ನು ಬಿಟ್ಟುಕೊಡಲಾಗಿದೆ. ಅದರ ಬದಲಾಗಿ ನಮ್ಮ ಸಲಹಾ ಕೋಶದಲ್ಲೇ ಈ ಹಿಂದೆ ತರಬೇತಿ ಪಡೆದಿರುವ ಅಧಿಕಾರಿಗಳಲ್ಲಿ ಒಬ್ಬರನ್ನು ಆಯ್ಕೆ ಮಾಡಿ ತರಬೇತಿಯ ಜವಾಬ್ದಾರಿಯನ್ನು ಅವರಿಗೆ ವಹಿಸಿಕೊಡಲಾಗುತ್ತದೆ. ಈ ಹುದ್ದೆಯನ್ನು 'ತರಬೇತುದಾರ' ಎಂದು ಹೆಸರಿಸಲಾಗಿತ್ತು. ಈಗ 'ವ್ಯವಸ್ಥಾಪಕ' ಎಂದು ಮಾರ್ಪಡಿಸಲಾಗಿದೆ.

## ಪ್ರಕಾರ್ಯಗಳು

ತಾಂತ್ರಿಕ ಸಲಹಾಕೋಶದ ಪ್ರಕಾರ್ಯಗಳು ಸ್ಥೂಲವಾಗಿ ಈ ಮುಂದಿನಂತಿವೆ :

(i) ಪರಿಯೋಜನೆಗಳ ಮೌಲ್ಯನಿರ್ಧಾರಣ ವರದಿಗಳನ್ನು ತಯಾರಿಸುವುದು ಮತ್ತು ದುಡಿಯುವ ಬಂಡವಾಳ ಅಗತ್ಯಗಳ ನಿರ್ಧಾರಣ ಮಾಡುವುದು.

(ii) ಅಸ್ವಸ್ಥ ಘಟಕಗಳ ಸಂಭಾವ್ಯ ಅರ್ಥಸಾಧ್ಯತೆಯನ್ನು ಪರಿಶೀಲಿಸಿ ಅಗತ್ಯ ಸಂದರ್ಭಗಳಲ್ಲಿ ಪುನಶ್ಚೇತನಾ ಪ್ಯಾಕೇಜನ್ನು ರಚಿಸುವುದು. ಮಾರುಕಟ್ಟೆ ಸರ್ವೇಕ್ಷಣದ ಅಗತ್ಯ ಕಂಡುಬಂದಾಗ ಅಂತಹ ಚಟುವಟಿಕೆಯನ್ನು ನಿರ್ವಹಿಸುವುದು.

(iii) ಬ್ಯಾಂಕಿನ ಅಧಿಕಾರಿಗಳಿಗೂ. ನೌಕರ ಸದಸ್ಯರಿಗೂ ತರಬೇತಿ ಕಾರ್ಯಕ್ರಮಗಳನ್ನು ನೀಡಲು ಸಹಕರಿಸುವುದು.

(iv) ಬಾಹ್ಯ ಸಂಸ್ಥೆಗಳು ಬ್ಯಾಂಕ್ ಸಿಬ್ಬಂದಿಗಾಗಿ ನಡೆಸುವ ತರಬೇತಿ ಕಾರ್ಯಕ್ರಮಗಳಲ್ಲಿ ಬೋಧನಾಂಗದ ಕಾರ್ಯ ನಿರ್ವಹಿಸುವುದು. ಅಥವಾ ಬೋಧನಾಂಗದ ನೆರವು ಒದಗಿಸುವುದು. ಉದಾ: ಚರ್ಮ ಕೈಗಾರಿಕೆಯಂಥ ಬಾಹ್ಯ ಉದ್ಯಮವೊಂದು ಬ್ಯಾಂಕ್ ಸಿಬ್ಬಂದಿಗಾಗಿ (ವಿಶಿಷ್ಟ ತರಬೇತಿ ರೂಪಿಸಿದಾಗ, ಅದಕ್ಕೆ ಸೂಕ್ತ ಸಹಕಾರ—ನೆರವು ಒದಗಿಸುವುದು.)

(v) ವಿವಿಧ ರಾಷ್ಟ್ರಮಟ್ಟದ ಸಮಿತಿಗಳಲ್ಲಿ, ನಿಯತಕಾಲಿಕ ಸಭೆಗಳಲ್ಲಿ ಬ್ಯಾಂಕನ್ನು ಪ್ರತಿನಿಧಿಸುವುದು.

(vi) ಕೈಗಾರಿಕೆಗಳ ಕಾರ್ಯನಿರ್ವಹಣೆಯನ್ನು ಪರಿಚಯಿಸುವ ಲೇಖನಗಳು ಮತ್ತು ಸರ್ಕಾರ ಹಾಗೂ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಕಾಲಕಾಲಕ್ಕೆ ಘೋಷಿಸುವ ಬದಲಾವಣೆಗಳು ಮತ್ತು ಬೆಳವಣಿಗೆಗಳನ್ನು ಪ್ರಕಟಿಸುವಂತಹ ನಿಯತಕಾಲಿಕಗಳನ್ನು ಹೊರ ತರುವುದು.

(vii) ಅಗತ್ಯ ಸಂದರ್ಭಗಳಲ್ಲಿ ಮಾರುಕಟ್ಟೆ ವಿಶ್ಲೇಷಣೆ, ಮಾರು ಕಟ್ಟೆ ಅಧ್ಯಯನಗಳನ್ನು ನಡೆಸಿ ಆ ಬಗ್ಗೆಯೂ ಪ್ರಕಟಣೆಗಳನ್ನು ಹೊರತರಬಹುದು.

(viii) ಕಾಲಕಾಲಕ್ಕೆ ಸುತ್ತೋಲೆಗಳನ್ನು ಹೊರಡಿಸುವುದು.

(ix) ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ಆವಿಷ್ಕಾರಗಳಾದಾಗ, ಸಂಬಂಧಿತ ಮಾರುಕಟ್ಟೆಯ ಬಗ್ಗೆ ಮಾಹಿತಿ ಸಂಗ್ರಹ ಮಾಡುವುದು.

(x) ಪತ್ರಿಕಾ ವರದಿಗಳ ಸಂಗ್ರಹಣೆ, ಕೈಗಾರಿಕೆಗಳ ಮಾಹಿತಿಪೂರ್ಣ ಪರಿಚಯಗಳ ಪ್ರಕಟಣೆ.

ಇವುಗಳಲ್ಲದೆ ನಿರ್ದಿಷ್ಟ ತಾಂತ್ರಿಕ ವಿಷಯಗಳಲ್ಲಿ ಮಾಹಿತಿ, ಸಲಹೆ ಬೇಕಾದಾಗ, ವಿಶಿಷ್ಟ ತಾಂತ್ರಿಕ ಸಮಸ್ಯೆಗಳು ಉದ್ಭವಿಸಿದಾಗ, ಬ್ಯಾಂಕ್ ಶಾಖೆಗಳು ಮತ್ತು ಪ್ರಾದೇಶಿಕ ವಲಯ ಕಛೇರಿಗಳು ಸಲಹಾಕೋಶವನ್ನು ಸಂಪರ್ಕಿಸುವುದುಂಟು.

### ಸಿಬ್ಬಂದಿಯ ಆಯ್ಕೆ ಕಾರ್ಯ ಸ್ವರೂಪ

ಸಲಹಾಕೋಶದ ಸಿಬ್ಬಂದಿಯ ಕಾರ್ಯಸ್ವರೂಪ ಬೇರೆ ವಿಭಾಗಗಳಿಗಿಂತ ಭಿನ್ನವೂ ವಿಶಿಷ್ಟವೂ ಆಗಿರುತ್ತದೆ. ವಿಶಿಷ್ಟ ಬಗೆಯ ಕೌಶಲಗಳನ್ನೂ, ಸಾಮರ್ಥ್ಯವನ್ನೂ ಅವರಿಂದ ನಿರೀಕ್ಷಿಸುತ್ತದೆ. ಕೆಲವು ಸಾಮಾನ್ಯ ಮಾನದಂಡಗಳನ್ನು ಅನುಸರಿಸುವುದರ ಜೊತೆಗೆ ತಾಂತ್ರಿಕ ಶಿಕ್ಷಣ ವಿಜ್ಞಾನ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ, ಇಂತಹ ಸಾಧನೆಗಳಿಗೆ ಆಯ್ಕೆಯ ಸಮಯದಲ್ಲಿ ಒತ್ತು ಕೊಡಲಾಗುತ್ತದೆ. ಆಯ್ಕೆಯ ಪ್ರಕ್ರಿಯೆ ಲಿಖಿತ ಪರೀಕ್ಷೆ, ಸಾಮೂಹಿಕ ಚರ್ಚೆ, ವೈಯಕ್ತಿಕ ಸಂದರ್ಶನಗಳನ್ನು ಒಳಗೊಂಡಿರುತ್ತದೆ.

ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಸಾಮಾನ್ಯವಾಗಿ ಹೊಸ ಘಟಕಗಳನ್ನು ವಹಿಸಿಕೊಟ್ಟು, ಅವುಗಳನ್ನು ಅಧ್ಯಯನ ಮಾಡುವ ಅವಕಾಶವನ್ನು ಕಲ್ಪಿಸಲಾಗುತ್ತದೆ. ತರಬೇತಿಯ ಕಾಲದಲ್ಲಿ ಪ್ರತಿದಿನವೂ ಸಲಹಾಕೋಶಕ್ಕೆ ಬರುವ ಅಗತ್ಯವಿರುವುದಿಲ್ಲ. ಕಛೇರಿ ವೇಳೆಯಲ್ಲೂ ಆ ಕಾರ್ಯಕ್ಷೇತ್ರದಲ್ಲೇ ಉಳಿದು, ಆ ಕೈಗಾರಿಕೆಯ ಎಲ್ಲ ಆಯಾಮಗಳ ಬಗ್ಗೆಯೂ ತಿಳಿವಳಿಕೆ ಪಡೆಯುವ, ಸಲಹೆ ಸೂಚನೆಗಳನ್ನು ನೀಡುವ, ಪರಿಯೋಜನೆಗಳನ್ನು ತಯಾರಿಸುವ, ಇವೇ ಮುಂತಾದ ಕಾರ್ಯಗಳು ಅಭ್ಯರ್ಥಿಯದಾಗಿರುತ್ತವೆ. ತರಬೇತಿ ಪಡೆಯುತ್ತಿರುವ ಎಲ್ಲ ಅಭ್ಯರ್ಥಿಗಳೂ ತರಬೇತುದಾರನೊಂದಿಗೆ ನಿಯತಕಾಲಿಕವಾಗಿ ಸಲಹಾಕೋಶದಲ್ಲಿ ಕಲೆತು ವಿಚಾರ ವಿನಿಮಯ ಮಾಡಿಕೊಂಡು, ಸಮಸ್ಯೆಗಳನ್ನು ಚರ್ಚಿಸುವ ಮತ್ತು ಪರಿಹಾರಗಳನ್ನು ಕಂಡುಕೊಳ್ಳುವ ಪರಿಪಾಟವಿದೆ. ತರಬೇತುದಾರರು ತರಬೇತಿ ಅಧಿಕಾರಿಗಳಿಗೆ ಉಪನ್ಯಾಸಗಳನ್ನು ನೀಡುವುದೂ, ಅವರೊಂದಿಗೆ ಕೈಗಾರಿಕಾ ಆವರಣಗಳಿಗೆ ಭೇಟಿ ನೀಡಿ ಅಲ್ಲಿಯೇ ಅವರಿಗೆ ಮಾರ್ಗದರ್ಶನ ಒದಗಿಸುವುದೂ ಉಂಟು. ಸಲಹಾಕೋಶದಲ್ಲಿ ಒಮ್ಮೆ ತರಬೇತಿ ಪಡೆದ ಅಧಿಕಾರಿಗಳನ್ನು ಮತ್ತೆ ಸಲಹಾಕೋಶಗಳಲ್ಲಿ ನೇಮಕ ಮಾಡುವುದಿಲ್ಲ. ಆದರೆ ತರಬೇತಿ ಪಡೆದವರು ತರಬೇತುದಾರರಾಗಿ ಆಯ್ಕೆಗೊಂಡು ಬರುವ ಸಾಧ್ಯತೆಯಿರುತ್ತದೆ.

ಸಲಹಾಕೋಶದಲ್ಲಿ ತರಬೇತಿ ಪಡೆದ ಸಿಬ್ಬಂದಿ ಸದಸ್ಯರಿಗೆ ಸೂಕ್ತ ಶಾಖೆಗಳಲ್ಲಿ ಸ್ಥಾನಗಳಲ್ಲಿ ಜವಾಬ್ದಾರಿ ವಹಿಸಿಕೊಟ್ಟದ್ದೇ ಆದಲ್ಲಿ, ಅವರು ಗಳಿಸಿಕೊಂಡ ವಿಶೇಷ ಜ್ಞಾನವನ್ನು ಅನ್ವಯಿಸಲು ಸಾಕಷ್ಟು ಅವಕಾಶವಿರುತ್ತದೆ. ವಿಸ್ತಾರಗೊಳ್ಳುತ್ತಲೇ ನಡೆದಿರುವ ಬ್ಯಾಂಕ್ ಹಾಗೂ ಸಣ್ಣ ಕೈಗಾರಿಕಾ ವಲಯದ ನಡುವಣ ಪರಸ್ಪರ ಕ್ರಿಯೆ ಒಂದು ಕಾರಣವಾದರೆ, ಸಣ್ಣ ಕೈಗಾರಿಕಾವಲಯ ಅಸ್ವಸ್ಥಗೊಳ್ಳುವ ಪ್ರವೃತ್ತಿಯನ್ನು ಪ್ರಬಲವಾಗಿ ಹೊಂದಿರುವುದು ಮತ್ತೊಂದು ಕಾರಣ. ಅಂದಾಜೊಂದರ ಪ್ರಕಾರ, ಪ್ರತಿಯೊಂದು ಕೆಲಸದ ದಿನದಂದು ಸುಮಾರು 90 ಘಟಕಗಳು ಅಸ್ವಸ್ಥವಾಗುತ್ತಿವೆ ; ಸಣ್ಣ ಕೈಗಾರಿಕಾ ವಲಯದ ಪ್ರತಿ ಮೂರನೇ ಅಥವಾ ನಾಲ್ಕನೇ ಘಟಕ ಅಸ್ವಸ್ಥವಾಗುತ್ತ ನಡೆದಿದೆ ಎಂದು ತಿಳಿದುಬಂದಿದೆ. ವಿಸ್ತಾರಗೊಳ್ಳುತ್ತಲೇ ಇರುವ ಸಣ್ಣ ಕೈಗಾರಿಕಾ ವಲಯ ನವನವೀನ ಚಟುವಟಿಕೆಗಳನ್ನು ಮೈಗೂಡಿಸಿಕೊಂಡು, ಹೊಸ ಹೊಸ ಎಡರುತೊಡರುಗಳಿಗೆ ಒಳಗಾಗುತ್ತಲೇ ಇದೆ. ಘಟಕಗಳ ಕೈ ಮೀರಿದಂಥ ನಾನಾ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳೂ ಅಸ್ವಸ್ಥತೆಗೆ ಕಾರಣವಾದ್ದರಿಂದ, ಇದೊಂದು ಸವಾಲಿನ ಕ್ಷೇತ್ರವೇ ಸರಿ. ಇಂಥ ಪರಿಸರದಲ್ಲಿ ತಮ್ಮ ಜ್ಞಾನಭಂಡಾರವನ್ನು ವೃದ್ಧಿಸಿಕೊಳ್ಳುವ ಕಾರ್ಯ ಮತ್ತು ಗಳಿಸಿಕೊಂಡ ಜ್ಞಾನ, ಅನುಭವಗಳನ್ನು ಅನ್ವಯಿಸುವ ಎರಡೂ ಕಾರ್ಯಗಳು ಏಕಕಾಲದಲ್ಲಿ ನಡೆಯುತ್ತಿರುತ್ತವೆ.

ಸಲಹಾಕೋಶ ನಿರ್ವಹಿಸಲು ಅಸಮರ್ಥವಾದಂಥ ಪರಿಯೋಜನೆಗಳು, ಸಂದರ್ಭಗಳು ಒದಗಿಬಂದಲ್ಲಿ, ಬಾಹ್ಯ ಸಲಹಾ ಸಂಸ್ಥೆಗಳ ನೆರವು ಪಡೆಯಲು ಅವಕಾಶವಿದೆ. ಇಂಥ ಸಂದರ್ಭಗಳು ಅಪರೂಪವಾಗಿ ಆಗೊಮ್ಮೆ ಈಗೊಮ್ಮೆ ಏರ್ಪಟ್ಟಿರುವುದೂ ಉಂಟು. ತರಬೇತಿ ಅಧಿಕಾರಿಗಳು ತಾಂತ್ರಿಕ ಮತ್ತು ತಂತ್ರಜ್ಞಾನಿಕ ವಿಷಯಗಳನ್ನು ಕುರಿತಂತೆ ಅರ್ಥಸಾಧ್ಯತೆ, ಮೌಲ್ಯಾಂಕನಗಳ ಚೌಕಟ್ಟಿನಲ್ಲಿ ಸಲಹೆ ನೀಡುವುದು ಉದ್ದೇಶಿತ ಗುರಿಯಾಗಿದ್ದರೂ ಕೂಡ, ಅನೌಪಚಾರಿಕವಾಗಿ ಇತರ ವಿಷಯಗಳ ಬಗ್ಗೆ, ಒಮ್ಮೊಮ್ಮೆ ಅವರ ಆಡಳಿತ ವಿಚಾರಗಳಲ್ಲೂ ಸಲಹೆ ಸೂಚನೆಗಳನ್ನು ನೀಡುವುದುಂಟು.

ಅಧಿಕಾರಿಗಳ ತಾಂತ್ರಿಕ ತರಬೇತಿಗೆ ಅವಕಾಶ ನೀಡುವ ಸಲಹಾ ಕೋಶ ನೌಕರ ವರ್ಗದವರಿಗೂ ಈ ಕ್ಷೇತ್ರದಲ್ಲಿ ಅನುಭವವನ್ನು ಲಭ್ಯಗೊಳಿಸುವ ಉದ್ದೇಶವನ್ನು ವೈಗೂಡಿಸಿಕೊಳ್ಳಬೇಕಾಗಿದೆ. ಬ್ಯಾಂಕಿಂಗ್ ಸಂಸ್ಥೆಯ ರಚನೆ ಮತ್ತು ನೌಕರ ವರ್ಗದವರ ಕರ್ತವ್ಯ, ಜವಾಬ್ದಾರಿಗಳ ಪ್ರಶ್ನೆಯೊಂದಿಗೆ ಇದು ಸಂಬಂಧ ಹೊಂದಿದೆ. ನೌಕರ ವರ್ಗದ ಸದಸ್ಯರನ್ನೂ ಸಲಹಾಕಾರ್ಯದಲ್ಲಿ ಒಳಗೊಳ್ಳು ವಂಥ ರಚನೆಯನ್ನು ರೂಪಿಸಿಕೊಳ್ಳುವುದು ಕೈಗಾರಿಕೆಯ ದೃಷ್ಟಿ ಯಿಂದ, ಮಾನವಸಂಪನ್ಮೂಲಗಳನ್ನು ಬೆಳೆಸುವ ದೃಷ್ಟಿಯಿಂದ ಅತ್ಯಂತ ಸೂಕ್ತವೆಂದು ತೋರುತ್ತದೆ.

ಸ್ಟೇಟ್ ಬ್ಯಾಂಕ್ ಸಮೂಹದ ಸಲಹಾಕೋಶಗಳಲ್ಲಿ ಸಾಮಾನ್ಯ ವಾಗಿ ಬ್ಯಾಂಕಿಂಗ್ ಹಿನ್ನೆಲೆ ಮತ್ತು ಅನುಭವ ಹೊಂದಿರುವ, ನಿಗದಿತ ಮಾನದಂಡಗಳ ಮೇರೆಗೆ ಆರಿಸಿಬಂದ ಅಧಿಕಾರಿಗಳನ್ನು ನೇಮಿಸಲಾಗುತ್ತದೆ. ಹಣಕಾಸು ಹೂಡಿಕೆ ಮತ್ತು ಹಣಕಾಸಿನ ಕಾರ್ಯಾಚರಣೆಗಳ ಬಗ್ಗೆ ಜ್ಞಾನವಿರುವ ಇವರು, ತರಬೇತಿ ಮೂಲಕ ತಾಂತ್ರಿಕ ವಿಷಯಗಳ ಜ್ಞಾನವನ್ನು ಪಡೆದುಕೊಂಡು, ಬ್ಯಾಂಕಿಂಗ್ ಮತ್ತು ಸಣ್ಣ ಕೈಗಾರಿಕಾ ಕ್ಷೇತ್ರ, ಎರಡನ್ನೂ ಸಮಗ್ರ ವಾಗಿ ವೀಕ್ಷಿಸಬಲ್ಲ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಜೊತೆಗೆ ತಾಂತ್ರಿಕ ವಿಷಯಗಳನ್ನು ಹಣಕಾಸಿನ ಪರಿಭಾಷೆಗೆ ಪರಿವರ್ತಿಸಿ ಅರ್ಥೈಸಬಲ್ಲವರಾಗಿರುತ್ತಾರೆ. ಮತ್ತು ಈ ಕ್ಷೇತ್ರದಲ್ಲಿ ಕೈಗೊಳ್ಳಬೇಕಾದ ಸಂಶೋಧನೆಯನ್ನು ನಿರ್ವಹಿಸಬಲ್ಲವರಾಗಿರು ತ್ತಾರೆ. ಇತರ ಕೆಲವು ಬ್ಯಾಂಕುಗಳಲ್ಲಿ ಇಂಜಿನಿಯರಿಂಗ್ ಪದವೀ ಧರರು ಅಥವಾ ತಾಂತ್ರಿಕ ಶಿಕ್ಷಣ ಪಡೆದ ಅಭ್ಯರ್ಥಿಗಳನ್ನು ನೇರವಾಗಿ ಆಯ್ಕೆಮಾಡಿಕೊಳ್ಳುತ್ತಿರುವುದಾಗಿ ತಿಳಿದುಬಂದಿದೆ. ಇಂಥವರಿಗೆ ತಾಂತ್ರಿಕ ಪರಿಣತಿಯಿದ್ದರೂ, ಹಣಕಾಸಿನ ಕ್ಷೇತ್ರದ ಅನುಭವ ಇಲ್ಲದ ಕಾರಣ, ಹಣಕಾಸಿನ ಪರಿಭಾಷೆಯಲ್ಲಿ ತಾಂತ್ರಿಕ ವಿಷಯಗಳನ್ನು ತೂಗಿ ನೋಡುವ ಕಾರ್ಯ ತುಂಬ ಕಠಿಣವಾಗಿ ಪರಿಣಮಿಸಿ, ದಕ್ಷತೆ ದೂರವೇ ಉಳಿದಿದೆ ಎಂಬ ಅಭಿಪ್ರಾಯ ಕೇಳಿಬಂದಿದೆ.

ತಜ್ಞರನ್ನು ಒಳಗೊಂಡು ವಿಶಿಷ್ಟ ಚಟುವಟಿಕೆಯಲ್ಲಿ ತೊಡಗಿರುವ ಸಲಹಾಕೋಶದ ಪರಿಣಾಮಕತೆಯನ್ನು ಅಳೆಯಲು ಮಾತ್ರ ಯಾವುದೇ ನಿರ್ದಿಷ್ಟ ಮಾನದಂಡಗಳಿಲ್ಲ ಹಾಗೆ ಅಳೆಯಲು ಸಾಧ್ಯವೂ ಇಲ್ಲ. ನಿರ್ದಿಷ್ಟ ಅಂಶಗಳ ಬಗ್ಗೆ ತಾಂತ್ರಿಕ ಸಲಹೆ ನೀಡಿದ್ದ ಸಂದರ್ಭ ಗಳಲ್ಲಿ, ಅವುಗಳನ್ನು ಅಳವಡಿಸಲಾಯಿತೋ ಇಲ್ಲವೋ ಎಂಬ ಬಗ್ಗೆ, ಅಂಥ ಅಳವಡಿಕೆ ತಂದ ಪರಿಣಾಮಗಳ ಬಗ್ಗೆ ಅನುಸರಣೆ ಸಾಧ್ಯ. ಆದರೆ ಪರಿಯೋಜನೆಗಳನ್ನು, ಅರ್ಥಸಾಧ್ಯತೆಯ ಅಧ್ಯಯನ ವರದಿಗಳನ್ನು, ಪುನರ್ವಸತಿ ಪ್ಯಾಕೇಜುಗಳನ್ನು ಇಡಿ ಯಾಗಿ ತಯಾರಿಸಿ ಸಲ್ಲಿಸಿದ ಸಂದರ್ಭಗಳಲ್ಲಿ, ಅವುಗಳ ಭವಿಷ್ಯ ತಾಂತ್ರಿಕ ಸಲಹಾಕೋಶದ ಕೈಯಲ್ಲಿರುವುದಿಲ್ಲ. ಬ್ಯಾಂಕಿಂಗ್ ಅಧೋರಚನೆಯಲ್ಲಿ ಕಾರ್ಯಾಚರಣೆಗಳ ವಿಭಾಗವೂ ಸೇರಿದಂತೆ ಅವು ನಾನಾ ಹಂತಗಳನ್ನು ಹಾದು, ನಾನಾ ಬಗೆಯ ದೃಷ್ಟಿಕೋನ ಗಳಿಂದ ವೀಕ್ಷಿಸಲ್ಪಡುತ್ತವೆ. ವಾಸ್ತವವಾಗಿ, ಪರಿಯೋಜನೆಯನ್ನು ಸಿದ್ಧಪಡಿಸಿದ ಸಮುಖದಿಂದ ವಿವಿಧ ಹಂತಗಳಲ್ಲಿ ಆಗಬೇಕಾದ ಕೆಲಸಕಾರ್ಯಗಳ ಒಟ್ಟಾರೆ ಮೇಲ್ವಿಚಾರಣೆ ನಡೆಸುವಂಥ, ಅನುಸರಣೆ ಮಾಡುವಂಥ ಆಡಳಿತಯಂತ್ರ ಬ್ಯಾಂಕುಗಳಲ್ಲಿ ಲಭ್ಯ ವಿರುವುದಿಲ್ಲ. (ಇದು ಒಂದು ಬಗೆಯ ಸಂಶೋಧನಾ ವಿಭಾಗವಾದ್ದ ರಿಂದ, ಅಂತಹ ಯಂತ್ರದ ಅಗತ್ಯವಿಲ್ಲ ಎಂಬ ಅಭಿಪ್ರಾಯವೂ ಪ್ರಚಲಿತವಾಗಿದೆ.) ಪರಿಯೋಜನೆಗಳನ್ನು ಜಾರಿಗೆ ತರುವಲ್ಲಿ ಸಂದು ಹೋಗುವ ದೀರ್ಘ ಸಮಯ ಒಂದು ಕಾರಣವಾದರೆ, ಈ ಬಗೆಯ ಚಟುವಟಿಕೆಗಳನ್ನು ನಿಯಂತ್ರಿಸುವ ಹಲವಾರು ಅಂಶಗಳು ಒಟ್ಟಿಗೆ ಪ್ರಭಾವ ಬೀರುವ ಕಾರಣ, ಏಕರೂಪ ಮಾನದಂಡಗಳ ಸೃಷ್ಟಿ ಸಾಧ್ಯವಾಗುವುದಿಲ್ಲ. ಏಕರೂಪ ಮೌಲ್ಯಾಂಕನವೂ ಸಾಧ್ಯ ವಾಗುವುದಿಲ್ಲ. ಈ ವಿಭಾಗದ ಚಟುವಟಿಕೆಗಳ ಬಗ್ಗೆ ಅಂಕಿಅಂಶ ಗಳ ಪರಿಭಾಷೆಯಲ್ಲಿ ಮಾತನಾಡುವುದಾದರೆ, ಎಷ್ಟು ಸಂಖ್ಯೆಯ ಪರಿಯೋಜನೆಗಳು, ಅರ್ಥಸಾಧ್ಯತೆಯ ಅಧ್ಯಯನಗಳು, ಪುನ- ರ್ವಸತಿ ಪ್ಯಾಕೇಜುಗಳ್ನು ನಿರ್ವಹಿಸಲಾಯಿತು ಎಂಬ ಭಾಷೆಯಲ್ಲಿ ಮಾತ್ರ ಮಾತನಾಡಲು ಸಾಧ್ಯ.

ಇಂದು ಗಣಕೀಕರಣ ವ್ಯಾಪಕವಾಗುತ್ತಿದೆ, ತಂತ್ರಜ್ಞಾನ ಹೆಚ್ಚು ಹೆಚ್ಚು ಸಂಕೀರ್ಣವೂ ಸೂಕ್ಷ್ಮವೂ ಆಗುತ್ತಿದೆ. ಇಂತಹ ಸಂದರ್ಭದಲ್ಲಿ ತಾಂತ್ರಿಕ ಜ್ಞಾನದ ಅಗತ್ಯ ಹಿಂದೆಂದಿಗಿಂತಲೂ ಇಂದು ಹೆಚ್ಚಾಗಿದೆ. ಸಣ್ಣ ಕೈಗಾರಿಕಾ ವಲಯದಲ್ಲಿ ಕಂಡುಬರುತ್ತಿರುವ ನವೋನ್ಮೇಷ ಚಟುವಟಿಕೆಗಳೂ ಭಿನ್ನ ರೂಪ ತಳೆದಿವೆ. ಈ ಹೊಸ ವಾತಾವರಣ ವನ್ನು ಎದುರಿಸಲು ಮತ್ತು ಸಮರ್ಥವಾಗಿ ನಿಭಾಯಿಸಲು ತಾಂತ್ರಿಕ ಸಲಹಾ ಕೋಶದ ಸಿಬ್ಬಂದಿ ಸಜ್ಜುಗೊಳ್ಳಬೇಕಾಗಿದೆ. ಈಗಿರುವ ಸಂರಚನೆಯನ್ನೇ ಉಳಿಸಿಕೊಂಡು, ಈ ಸವಾಲನ್ನು ಎದುರಿಸಲು ಸಾಧ್ಯವೇ ಅಥವಾ ಸಲಹಾಕೋಶಗಳ ರಚನೆಯನ್ನೇ ಬದಲಾಯಿಸ ಬೇಕೆ ಎಂಬುದು ಈ ಹೊತ್ತಿನ ಪ್ರಶ್ನೆಯಾಗಿದೆ. ಈ ಕ್ಷೇತ್ರದಲ್ಲಿ ಉಂಟಾಗುತ್ತಿರುವ ಬದಲಾವಣೆಗಳ ವೇಗ ರಭಸಗಳನ್ನು ಗಮನಿಸಿದರೆ, ಗುಣಾತ್ಮಕ ಬದಲಾವಣೆ ಅನಿವಾರ್ಯವೆನಿಸುತ್ತದೆ. ಬಹುರಾಷ್ಟ್ರೀಯ ಕಂಪನಿಗಳ ಪೈಪೋಟಿ, ತಂತ್ರಜ್ಞಾನದ ಮೇರೆ ಯಿಲ್ಲದ ಆಮದು ಇವುಗಳಿಂದಾಗಿ ಸಣ್ಣ ಕೈಗಾರಿಕೆಗಳ ಅಸ್ತಿತ್ವಕ್ಕೇ ಅಪಾಯವುಂಟಾಗಿದೆ, ಚಟುವಟಿಕೆಗಳ ವೈವಿಧ್ಯಕ್ಕೂ ತೀವ್ರತರ ಧಕ್ಕೆ ಉಂಟಾಗಲಿದೆ. ವಿವಿಧೀಕರಣಕ್ಕೆ ಒತ್ತು ಕೊಡಬೇಕೆನ್ನುವ ಬ್ಯಾಂಕಿಂಗ್ ಕ್ಷೇತ್ರದ ಕರೆಯ ಜೊತೆಗೇ, ಬ್ಯಾಂಕುಗಳು ವೃತ್ತಿ ಪರತೆಯನ್ನು ವೈಗೂಡಿಸಿಕೊಳ್ಳಬೇಕೆಂಬ ಮನವರಿಕೆಯೂ ವ್ಯಾಪಕವಾಗುತ್ತಿದೆ. ಹೀಗಿರುವಾಗ, ಈಗಿರುವ ಚೌಕಟ್ಟಿನಲ್ಲೇ ಸಲಹಾಕೋಶಗಳಿಗೆ ವೃತ್ತಿಪರತೆಯ ಜೀವ ತುಂಬುವ ಕಾರ್ಯ ವಾದರೂ ಈ ಹೊತ್ತಿನಲ್ಲಿ ಅನಿವಾರ್ಯವಾಗಿದೆ. ಬಾಹ್ಯ ಸಮಾಲೋಚಕರ ನೆರವು, ಜ್ಞಾನಸೌಲಭ್ಯಗಳನ್ನು ಬಳಸಿಕೊಂಡು ಬ್ಯಾಂಕುಗಳ ಸಲಹಾಕೋಶಗಳು ದಕ್ಷತೆಯಿಂದ ಕಾರ್ಯನಿರ್ವಹಿಸ ಬೇಕಾಗಿದೆ. ●

# ಬ್ಯಾಂಕ್ ರಾಷ್ಟ್ರೀಕರಣದ ಬೆಳ್ಳಿಹಬ್ಬ: ಸಂಭ್ರಮವೋ ವಿಷಾದವೋ?

**ಕೆ. ಶಾಂತ**

ಭಾರತೀಯ ಸ್ಟೇಟ್ ಬ್ಯಾಂಕ್, ಜಯನಗರ 2ನೇ ಬ್ಲಾಕ್, ಬೆಂಗಳೂರು 560011

ಬ್ಯಾಂಕ್ ರಾಷ್ಟ್ರೀಕರಣದಿಂದ ಎಷ್ಟೇ ಪ್ರಮಾದಗಳಾಗಿರಲಿ, ರಾಷ್ಟ್ರೀಕೃತ ಬ್ಯಾಂಕುಗಳ ಬಗ್ಗೆ ಎಷ್ಟೇ ದೂರುಗಳಿರಲಿ, ರಾಷ್ಟ್ರೀಕರಣ ಬಹಳಮಟ್ಟಿಗೆ ಸಫಲವಾಗಿದೆಯೆಂದೇ ಹೇಳಬೇಕು. ನಮ್ಮ ಬ್ಯಾಂಕಿಂಗ್ ವ್ಯವಸ್ಥೆ ಬಲವಾಗಿದೆ. ಅದು ಸರಿಪಡಿಸಲಾಗದಷ್ಟು ಕೆಟ್ಟಿಲ್ಲ.

ಇಪ್ಪತ್ತೈದು ವರ್ಷಗಳಿಗೂ ಹಿಂದೆ ಜುಲೈ ತಿಂಗಳ 19ರಂದು ದೇಶದ ಹದಿನಾಲ್ಕು ಪ್ರಮುಖ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣವಾಯಿತು. ಇದಾದ ಹನ್ನೊಂದು ವರ್ಷಕ್ಕೆ, 1980ರಲ್ಲಿ ಇನ್ನೂ ಆರು ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರದ ಒಡೆತನಕ್ಕೆ ಒಪ್ಪಿಸಲಾಯಿತು. ಇಷ್ಟೇ ಅಲ್ಲದೆ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಅದರ ಸಹವರ್ತಿ ಬ್ಯಾಂಕುಗಳೂ ಸಾರ್ವಜನಿಕ ಕ್ಷೇತ್ರದಲ್ಲಿ ಸರ್ಕಾರದ ನಿಬಂಧನೆಗಳಿಗೆ ಒಳಪಟ್ಟು ಕಾರ್ಯ ನಿರ್ವಹಿಸುತ್ತಿವೆ. ಹೀಗಾಗಿ ವಾಣಿಜ್ಯ ಬ್ಯಾಂಕುಗಳಲ್ಲಿ ಸಂಗ್ರಹವಾಗಿದ್ದ ಅಪಾರ ಸಂಪನ್ಮೂಲ ದೇಶದ ಹಾಗೂ ಸಾರ್ವಜನಿಕ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಬಳಕೆಯಾಗಲು ಪ್ರಾರಂಭಿಸಿ, ಸಾರ್ವಜನಿಕರ ಮನಸ್ಸಿನಲ್ಲಿ ಇಂದು ಬ್ಯಾಂಕುಗಳೂ ಸರ್ಕಾರದ ಒಂದು ಇಲಾಖೆ ಎಂಬ ಭಾವನೆ ಬೆಳೆದಿದೆ. ದೇಶದ ಶೇಕಡಾ 90ರಷ್ಟು ಬ್ಯಾಂಕಿಂಗ್ ವಹಿವಾಟನ್ನು ರಾಷ್ಟ್ರೀಕೃತ ಬ್ಯಾಂಕುಗಳು ನಿರ್ವಹಿಸುತ್ತಿವೆ. ಖಾಸಗಿ ಬ್ಯಾಂಕುಗಳ ಸಂಖ್ಯೆ, ಕಾರ್ಯ, ವಹಿವಾಟು ಬಹಳ ಕಡಿಮೆ.

ಈ ಎರಡೂವರೆ ದಶಕಗಳಲ್ಲಿ ಪ್ರಪಂಚದ ಮುಖ್ಯ ದೇಶಗಳಲ್ಲಿ ಆರ್ಥಿಕ ಸುಧಾರಣಾ ನೀತಿ, ಶ್ರೀಸಾಮಾನ್ಯನ ಬೇಡಿಕೆಗಳು, ಸಾಮಾಜಿಕ ನ್ಯಾಯ ಒದಗಿಸುವಲ್ಲಿ ಸರ್ಕಾರ ಹಾಗೂ ಬ್ಯಾಂಕುಗಳ ಸೇವೆ, ಪಾತ್ರಗಳನ್ನು ಕುರಿತು ಬಹುದೊಡ್ಡ ಕ್ರಾಂತಿಕಾರಿ ಬದಲಾವಣೆಗಳೇ ಬಂದಿವೆ. ಇವೆಲ್ಲವುಗಳ ಪ್ರಭಾವ ಭಾರತದ ಮೇಲೆ, ಅದರ ಆರ್ಥಿಕ ಸುಧಾರಣೆಗಳ ಮೇಲೆ ಅಸಾಧಾರಣವಾಗಿದೆ.

ರಾಷ್ಟ್ರೀಕರಣದಿಂದ ಸಾಮಾಜಿಕ ನ್ಯಾಯ ಹಾಗೂ ಬಡವ ಶ್ರೀಮಂತರ ನಡುವಿನ ಅಂತರವನ್ನು ಕಡಿಮೆಮಾಡುವ ಉದ್ದೇಶದಿಂದ ಬ್ಯಾಂಕುಗಳನ್ನು ತನ್ನ ಸ್ವಾಮ್ಯಕ್ಕೆ ತೆಗೆದುಕೊಳ್ಳುವ ನೀತಿಯನ್ನು ಭಾರತ ಸರ್ಕಾರ ಅನುಸರಿಸಿತು. ಸಂಪನ್ಮೂಲಗಳ ಅಭಿವೃದ್ಧಿ, ಕ್ರೋಡೀಕರಣ, ಅವುಗಳ ಸರಿಯಾದ ಬಳಕೆ, ಯೋಗ್ಯ ರೀತಿಯಲ್ಲಿ ಹಂಚಿಕೆ, ಉದಾರ ಸಾಲ ನೀಡಿಕೆ ಮುಂತಾದ ಉದ್ದೇಶಗಳನ್ನು ಗಮನಾರ್ಹವಾಗಿ ಸಾಧಿಸುವುದರಲ್ಲಿ ಸರ್ಕಾರ ಸಫಲವಾಯಿತು.

ಈ ರಜತ ಮಹೋತ್ಸವದ ಸಂದರ್ಭದಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣದ ಔಚಿತ್ಯವನ್ನು ಪ್ರಶ್ನಿಸುವುದು ನಿಜಕ್ಕೂ ವಿಪರ್ಯಾಸವೇ ಆಗಿದೆ. ರಾಷ್ಟ್ರೀಕರಣದ ಪರವಾಗಿ ಈ ಮುಂದಿನ ಅಂಶಗಳನ್ನು ಮಂಡಿಸಬಹುದು :

1 ಬ್ಯಾಂಕುಗಳಿಗಿರುವ ಹಣ ಉತ್ಪಾದನ ಸಾಮರ್ಥ್ಯ ಪೂರ್ತಿಯಾಗಿ ಸರ್ಕಾರದ ಅಧೀನಕ್ಕೆ ಒಳಪಡುತ್ತದೆ.

2 ಸ್ವತಂತ್ರವಾಗಿರುವ ವಾಣಿಜ್ಯ ಬ್ಯಾಂಕಗಳು ಈ ಅಧೀನಕ್ಕೆ ಒಳಪಡುವುದಿಲ್ಲ.

3 ಇವುಗಳಿಂದ ರಾಷ್ಟ್ರೀಕೃತ ಬ್ಯಾಂಕುಗಳ ಪ್ರಗತಿ ಮತ್ತು ಸಾಮಾಜಿಕ ವ್ಯವಸ್ಥೆಗೆ ಧಕ್ಕೆ ಉಂಟಾಗುತ್ತದೆ.

4 ಖಾಸಗಿ ವಲಯದ ಬ್ಯಾಂಕುಗಳಿಗಿಂತ ರಾಷ್ಟ್ರೀಕೃತ ಬ್ಯಾಂಕುಗಳು ಉದರಿಯನ್ನು ದಕ್ಷವಾಗಿ ಹಂಚಿವೆ. ಹಾಗೂ ಉದರಿಯ ವೆಚ್ಚ ಕಡಿಮೆಗೊಳ್ಳುತ್ತದೆ.

## ಬದಲಾದ ಚಿತ್ರ

ಈ ಬಗೆಯ ರಾಷ್ಟ್ರೀಕರಣ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. 1944ರಲ್ಲಿ ಫ್ರೆಂಚ್ ಸರ್ಕಾರ ಕೇಂದ್ರೀಯ ಬ್ಯಾಂಕ್ ಜೊತೆಗೆ ಉಳಿದ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿತು. 1947ರಲ್ಲಿ ಆಸ್ಟ್ರೇಲಿಯಾದಲ್ಲೂ ಇದೇ ಯತ್ನ ನಡೆಯಿತಾದರೂ ಕೆಲವು ಕಾರಣಗಳಿಂದ ಅದು ಫಲಕಾರಿಯಾಗಲಿಲ್ಲ. ನಮ್ಮ ದೇಶದಲ್ಲಿ ಈ ಬ್ಯಾಂಕುಗಳ ಕಾರ್ಯಾಚರಣೆ ಹೆಮ್ಮೆಪಡುವಂಥದಾಗಿದೆ. ಎರಡೂವರೆ ದಶಕಗಳಲ್ಲಿ ಅವು ಶಾಖಾ ಸಂಖ್ಯೆಯನ್ನು ಅದ್ಭುತವಾಗಿ

ಹೆಚ್ಚಿಸಿಕೊಂಡುವು. 1969ಕ್ಕೆ ಮುಂಚೆ ಪ್ರತಿ 65,000 ಜನಕ್ಕೆ ಒಂದು ಬ್ಯಾಂಕ್ ಇದ್ದದ್ದು ಈಗ ಪ್ರತಿ ಹನ್ನೊಂದು ಸಾವಿರ ಜನರಿಗೆ ಒಂದರಂತೆ ಆಗಿದೆ. ಬ್ಯಾಂಕಿನ ಠೇವಣಿಗಳ ಮೊತ್ತ 3,182 ಕೋಟಿ ರೂ.ಗಳಿಂದ ಮಾರ್ಚ್ 1993ರ ವೇಳೆಗೆ 1,80,493 ಕೋಟಿ ರೂ.ಗಳಾಗಿದೆ. ಬ್ಯಾಂಕುಗಳು ನೀಡಿದ ಸಾಲಗಳು 95,958 ಕೋಟಿ ರೂ.ಗಳಿಗೇರಿದೆ.

ಈ ರೀತಿ ಬ್ಯಾಂಕುಗಳ ರಾಷ್ಟ್ರೀಕರಣ ಹಣಕಾಸು ಮತ್ತು ಬ್ಯಾಂಕಿಂಗ್ ನೀತಿಗಳನ್ನು ರೂಪಿಸಿ ಅನುಷ್ಠಾನಕ್ಕೆ ತರಲು ಅನುವು ಮಾಡಿಕೊಟ್ಟಿತ್ತು. ಉದಾಹರಣೆಗೆ ಇವು ಕೃಷಿಗೆ ನೀಡಿದ ಹಣದಿಂದ ನಮ್ಮ ದೇಶ ಕೃಷಿ ಉತ್ಪನ್ನದಲ್ಲಿ ಸ್ವಾವಲಂಬಿಯಾಯಿತು. ಕೈಗಾರಿಕೆಗಳು ವಿಕಾಸ ಹೊಂದಿ ಉದ್ಯೋಗಾವಕಾಶಗಳು ಹೆಚ್ಚಿದುವು. ಸಣ್ಣ ಉಳಿತಾಯದ ವಿಷಯದಲ್ಲೂ ಇವುಗಳ ಸಾಧನೆ ಅಮೋಘವಾದುದು.

ಅಂತೂ ಅಂದಿನ ಪ್ರಧಾನಿ ಇಂದಿರಾ ಗಾಂಧಿಯವರ ರಾಜಕೀಯ ಚಾಣಾಕ್ಷತನದಿಂದಾಗಿ ದೇಶದ ಬ್ಯಾಂಕಿಂಗ್ ಇತಿಹಾಸವೇ ಒಂದು ರೀತಿ ಪವಾಡಸದೃಶವಾಗಿ ಮಾರ್ಪಟ್ಟಿತು. ಬ್ಯಾಂಕಿಂಗ್ ಸಂದೇಶವನ್ನು ಹಳ್ಳಿಹಳ್ಳಿಗೂ ತಲುಪಿಸುವ ರಾಷ್ಟ್ರೀಕರಣದ ಉದ್ದೇಶ ನಮ್ಮ ಇಂದಿನ ಮಾಹಿತಿ ತಂತ್ರಜ್ಞಾನ ಜಾಲ, ದೂರದರ್ಶನ, ರೇಡಿಯೋ, ಉಪಗ್ರಹಗಳ ಸೇವಾ ಬಳಿಕೆಯಿಂದಾಗಿ ದೇಶದ ಹಣಕಾಸು, ಪೇರುಪೇಟೆ, ಹಣದುಬ್ಬರವನ್ನು ಇಳಿಸುವ ಕಾರ್ಯ, ಕೃಷಿವಲಯದಲ್ಲಿ ಹೊಸ ಹೊಸ ಸಂಶೋಧನೆ, ಅಭಿವೃದ್ಧಿ ಆವಿಷ್ಕಾರಗಳು, ಇವೇ ಮುಂತಾದ ಹತ್ತಾರು ದಿಕ್ಕುಗಳಲ್ಲಿ ಸಾಧಿಸಿವೆ.

ಅಂತೂ ಈ ಕಾಲು ಶತಮಾನದ ಅದ್ಭುತ ಸಾಧನೆಯನ್ನು ಎಲ್ಲ ರಾಷ್ಟ್ರೀಕರಣ ವಿರೋಧಿಗಳೂ ಒಪ್ಪಿಕೊಂಡಿದ್ದಾರೆ.

## ರಾಜಕೀಯ ಹಸ್ತಕ್ಷೇಪ

ಆದರೆ ಬರಬರುತ್ತ, ಅದರಲ್ಲೂ ರಾಜಕೀಯಪ್ರೇರಿತ ಶಕ್ತಿಗಳ ಹಸ್ತಕ್ಷೇಪ ಜಾಸ್ತಿಯಾಗಿ, ಬ್ಯಾಂಕಿಂಗ್ ಉದ್ಯಮ ದುರ್ಬಲವಾಗತೊಡಗಿತು. ಬ್ಯಾಂಕುಗಳು ಈ ಹಿಂದೆಯೂ ಸಾಲದ ಸುರಕ್ಷತೆಯ ಬಗ್ಗೆಯೂ ಗಮನವಿಡುತ್ತಿತ್ತು. ಆದರೆ ರಾಜಕೀಯ ಹಿತಾಸಕ್ತಿಗೆ ಮಣಿದು ಇದನ್ನು ಕಡೆಗಣಿಸಬೇಕಾಯಿತು. ಇಂತಹ ಒತ್ತಾಯಕ್ಕೆ ಬಗ್ಗದ ಅಧಿಕಾರಿಗಳನ್ನು ಎಲ್ಲೆಂದರಲ್ಲಿ ವರ್ಗಮಾಡಿ ಅವಮಾನಿಸಲಾಯಿತು. ಬ್ಯಾಂಕಿಂಗ್ ನೀತಿ ನಿಯಮಾವಳಿಗಳಿಗಿಂತಲೂರಾಜಕೀಯಪಕ್ಷ, ವ್ಯಕ್ತಿ, ಮಂತ್ರಿಮಹೋದಯರ ಆಶಯದಂತೆ ಸಾಲ ವಿತರಣೆ ನಡೆಯುತ್ತಿತ್ತು. ಪಕ್ಷದ ಪ್ರಚಾರ ಕಾರ್ಯಕ್ಕಾಗಿ ಸಾಲಮೇಳದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಇದರಿಂದ ಬ್ಯಾಂಕಿನ ಸಿಬ್ಬಂದಿ ಮತ್ತು ಅಧಿಕಾರ ವರ್ಗ ಭ್ರಷ್ಟಾಚಾರಕ್ಕೆ ಇಳಿಯುವಂತೆ ಪ್ರೇರಣೆ ಉಂಟಾಯಿತು. ಸಾಲವಿತರಣೆ, ವಸೂಲಾತಿಯಲ್ಲಿ ಹಿನ್ನಡೆ ಉಂಟಾಯಿತು.

ಅನಂತರ ಸಾಲ ಮನ್ನಾದ ಹಾವಳಿ ಪ್ರಾರಂಭವಾಯಿತು. ಅತಿಯಾದ ರಾಜಕೀಯ ಹಸ್ತಕ್ಷೇಪದಿಂದ ಇದರಲ್ಲಿ ಪೈಪೋಟಿ ಉಂಟಾಯಿತು. ಕಷ್ಟ ಪರಿಸ್ಥಿತಿ, ಪ್ರಕೃತಿ ವಿಕೋಪ ಮುಂತಾದ ಕಾರಣಗಳಿಂದ ರೈತರು ಹಾಗೂ ಗ್ರಾಮೀಣ ಪ್ರದೇಶದ ಕುಶಲ ಕರ್ಮಿಗಳಿಗೆ ಸೈದ್ಧಾಂತಿಕವಾಗಿ ರಿಯಾಯಿತಿ ತೋರುವುದು (ಸಣ್ಣ ಪ್ರಮಾಣದಲ್ಲಿ) ಎಲ್ಲರೂ ಒಪ್ಪತಕ್ಕ ಮಾತು. ಆದರೆ ಭಾರೀ ಪ್ರಮಾಣದ ರಿಯಾಯಿತಿ, ಸಾಲಮನ್ನಾ, ಭಿನ್ನಕ ಬಡ್ಡಿದರಗಳು, ಗ್ರಾಮೀಣ ಪ್ರದೇಶವಲ್ಲದೆ ರಾಜಕೀಯ ವ್ಯಕ್ತಿಗಳ, ಪಕ್ಷಗಳ ಶಿಫಾರಸಿನಿಂದ ನಗರಪ್ರದೇಶದ ಭಾರಿ ಸಾಲಗಾರರಿಗೂ ರಿಯಾಯಿತಿ—ಇದರಿಂದ ಬ್ಯಾಂಕುಗಳಿಗೆ ಆಘಾತವುಂಟಾಯಿತು. ಬ್ಯಾಂಕಿನ ಹಣಕಾಸು ಸ್ಥಿತಿಯ ಮೇಲೆ ತೀವ್ರ ದುಷ್ಪರಿಣಾಮ ಉಂಟಾಯಿತು. ಅಲ್ಲದೆ ಸಾಲ ಕೊಡುವವರ ನೈತಿಕ ಪತನಕ್ಕೂ ಇದು ಕಾರಣವಾಯಿತು. ಇಂತಹ ಸಾಲಗಳಿಂದ ಬ್ಯಾಂಕುಗಳು ನಷ್ಟ ಅನುಭವಿಸುತ್ತಿರುವುದನ್ನು ಈಗಲೂ ನೋಡುತ್ತಿದ್ದೇವೆ. ಇದರಿಂದ ದೇಶದ ಆರ್ಥಿಕ ಅಭಿವೃದ್ಧಿ ಕುಂಠಿತವಾಯಿತು.

## ಸಿಬ್ಬಂದಿಯ ಅನಾಸಕ್ತಿ

ಇವುಗಳಲ್ಲದೆ ರಾಷ್ಟ್ರೀಕರಣ ನೀತಿಗೆ ಸವಾಲಾಗಿ ನಿಂತ ಮತ್ತೊಂದು ಪಿಡುಗೆಂದರೆ ಸಿಬ್ಬಂದಿ ವರ್ಗದವರಿಂದ ಬಂದ ಅನಾಸಕ್ತಿ ಧೋರಣೆ. ಗ್ರಾಹಕರ ಸೇವೆಯಲ್ಲಿ ಅನಾದರಣೆ, ವೇತನ ಪರಿಷ್ಕರಣೆಗೆ ಒತ್ತಾಯ, ವೇತನಕ್ಕೆ ತಕ್ಕಷ್ಟು ದುಡಿಯದಿರುವುದು, ಮನಸ್ಸಿಗೆ ಬಂದಾಗಲೆಲ್ಲ, ಸಣ್ಣಪುಟ್ಟ ಕಾರಣಗಳಿಗೆಲ್ಲ ಮುಷ್ಕರಕ್ಕೆ ಕರೆ ಕೊಡುವುದು—ಈ ಎಲ್ಲ ಕಾರಣಗಳಿಂದ ಈಗ ಅತಿ ಹೆಚ್ಚಿನ ವೇತನ ಪಡೆಯುವ ಬ್ಯಾಂಕ್ ಉದ್ಯೋಗಿಗಳ ಮೇಲೆ ಸಾರ್ವಜನಿಕ ಸಹಾನುಭೂತಿ ಇಲ್ಲವೇ ಇಲ್ಲ.

## ಮುಷ್ಕರ

ಇತ್ತೀಚಿನ ದಿನಗಳಲ್ಲಿ ಅತಿ ವಿಪರೀತವಾಗಿ ಏರುತ್ತಿರುವ ಬ್ಯಾಂಕ್ ನೌಕರರ ಮುಷ್ಕರವನ್ನು ನೋಡುವಾಗ ಮುಷ್ಕರ ಮಾಡುವುದೇ ಸಂಘಟಿತ ಕ್ಷೇತ್ರದ ಮುಖ್ಯ ಕಸುಬಾಗಿರಬಹುದೇ ಎಂಬಂತೆ ಕಾಣುತ್ತಿದೆ. ಈ ದೈನಂದಿನ ಮುಷ್ಕರದಿಂದ ನಮ್ಮ ವ್ಯವಸ್ಥೆ ಅತ್ಯಂತ ಶಿಥಿಲಗೊಂಡಿದೆ. ಶಿಸ್ತು ತೀರಾ ಹಿಂದಾಗಿದೆ. ಶ್ರದ್ಧೆ ಕಡಿಮೆಯಾಗಿ ನಾವು ಆರ್ಥಿಕವಾಗಿ ದರಿದ್ರರಾಗಿದ್ದೇವೆ. ನೈತಿಕವಾಗಿ ಸೋತಿದ್ದೇವೆ. ಬಡತನ ನಿರ್ಮೂಲನೆಯ ಉದ್ದೇಶ ಹೊಂದಿರುವ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಸಾಲು ಸಾಲು ಮುಷ್ಕರಗಳಿಂದ ಆಗಿರುವ ಆರ್ಥಿಕ, ಸಾಮಾಜಿಕ ಅನಾಹತಗಳ ಕಲ್ಪನೆ ನಮಗಿದೆಯೆ ?

1994 ಎಂಬುದು ಬ್ಯಾಂಕ್ ಮುಷ್ಕರಗಳ ವರ್ಷ ಎಂದೇ ಒಂದು ಪತ್ರಿಕೆ ಬಣ್ಣಿಸಿದೆ. ಹಿಂದಿನ ಒಂದು ವರ್ಷದಲ್ಲಿ ಬ್ಯಾಂಕುಗಳು ಐದು ಬಾರಿ ಮುಷ್ಕರ ಹೂಡಿದರೆ, 1994ರಲ್ಲಿ ಜೂನ್ ಮೊದಲ ವಾರದೊಳಗೇ ನಡೆದ ಮುಷ್ಕರಗಳು ಆರು. ಏಪ್ರಿಲ್ 11, ಮೇ 5, 11, 24 ಮತ್ತು ಜೂನ್ 2 ಮತ್ತು 3. ಈ ಮುಷ್ಕರ

ದಿನಾಂಕದ ಅಕ್ಕಪಕ್ಕ ರಜೆ ಇರುತ್ತದೆ. ಅಂದರೆ ಸತತವಾಗಿ ಕೆಲಸ ಮಾಡದೇ ಜನರನ್ನು ಪೀಡಿಸುವುದೇ ಇವರ ಮುಖ್ಯ ಉದ್ದೇಶ. ಜನರ ಕಷ್ಟಕ್ಕೆ ಇವರ ಬಳಿ ಮೂರು ಕಾಸಿನ ಬೆಲೆಯಿಲ್ಲ. ಕ್ಷುಲ್ಲಕ ಕಾರಣಗಳಿಗೆ ಬ್ಯಾಂಕ್ ಅಧಿಕಾರಿಗಳೂ ಮುಷ್ಕರಕ್ಕೆ ಇಳಿಯುತ್ತಾರೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಸೇವೆ ಅತ್ಯಂತ ಕಳಪೆಯಾಗಿದೆ. ಅದನ್ನು ಸರಿಪಡಿಸುವ ಕುರಿತು ಬ್ಯಾಂಕ್ ಸಂಘಗಳಾಗಲಿ, ಆಡಳಿತ ವರ್ಗವಾಗಲಿ, ಯೋಚನೆ ಮಾಡುವ ಸೂಚನೆಯೇ ಇಲ್ಲ. ಈ ಸಂಘಗಳು ಒಂದು ರೀತಿ ಬ್ಯಾಂಕ್ ಆಡಳಿತ ವರ್ಗಕ್ಕೂ, ಗ್ರಾಹಕ ನಿಗೂ ಬ್ಲಾಕ್‌ಮೇಲ್ ಮಾಡುತ್ತಿದೆ. ಮೇ 5ರ ಮುಷ್ಕರದಿಂದಾಗಿ 6,000 ಕೋಟಿ ರೂಗಳ ಚೆಕ್ ಇತ್ಯಾದಿಗಳು ವಿಲೇವಾರಿಯಾಗ ಲಿಲ್ಲ. ಇದಕ್ಕೆ ಯಾರು ಹೊಣೆ? ಮುಂಬಯಿಯಲ್ಲಿ ನಡೆಸಿದ ಒಂದು ಅಧ್ಯಯನದ ಪ್ರಕಾರ ಬ್ಯಾಂಕುಗಳ ಸುಮಾರು 25,000 ನೌಕರರು ಕೆಲಸ ಮಾಡದೇ ಪೂರ್ತಿಯಾಗಿ ಸಂಘದ ಕೆಲಸಗಳನ್ನೇ ಮಾಡಿಕೊಳ್ಳುತ್ತಾರೆ.

### ಇತರ ಸಮಸ್ಯೆಗಳು

ಇಷ್ಟೇ ಅಲ್ಲದೆ ವಿದೇಶಿ ಬ್ಯಾಂಕುಗಳು ಪೈಪೋಟಿಯ ವಾತಾವರಣ ಸೃಷ್ಟಿಸುತ್ತಿವೆ. ನಮ್ಮ ಬ್ಯಾಂಕುಗಳು ಹೊರಗಡೆ ಶಾಖೆಗಳನ್ನು ತೆರೆದಂತೆಯೇ, ಎಲ್ಲ ನಗರಗಳಲ್ಲೂ ಶಾಖೆ ತೆಗೆಯ ಲಿಕ್ಕೆ ವಿದೇಶೀ ಬ್ಯಾಂಕುಗಳಿಗೂ ಅವಕಾಶ ನೀಡಬೇಕಾಗಿದೆ. ಆದರೆ ವ್ಯಾಪಕ ಕಂಪ್ಯೂಟರೀಕರಣ, ಸಿಬ್ಬಂದಿ ಬೆಳವಣಿಗೆ ಮತ್ತು ಗ್ರಾಹಕರ ಸಂತೃಪ್ತಿಗೆ ಆದ್ಯತೆ ಕೊಟ್ಟಾಗ ಮಾತ್ರ ಈ ಪೈಪೋಟಿ ಎದುರಿಸಲು ಬ್ಯಾಂಕುಗಳಿಗೆ ಸಾಧ್ಯವಾಗುತ್ತದೆ. ಎಲ್ಲಕ್ಕಿಂತ ಮುಖ್ಯ ವಾಗಿ ಬ್ಯಾಂಕುಗಳು ಸೇವಾ ಶುಲ್ಕವನ್ನು ಪದೇಪದೇ ಹೆಚ್ಚಿಸು ತ್ತಿರುವುದು ಅಸಮರ್ಥನೀಯ.

ಹಾಗೆಂದು ಬ್ಯಾಂಕುಗಳು ಇತರರ ಮೇಲೆ ಸಂಪೂರ್ಣವಾಗಿ ಗೂಬೆ ಕೂರಿಸುವಂತಿಲ್ಲ. ಸ್ವಲ್ಪಮಟ್ಟಿಗೆ ಅವುಗಳ ಆಡಳಿತ ಮಂಡಲಿಯೂ ಯಾರ ಹತೋಟಿ ಇಲ್ಲದ ಕಾರಣ ಬೇಜವಾಬ್ದಾರಿ ಯಿಂದ ನಡೆದುಕೊಂಡಿದೆ. ಮಾರ್ಚ್ 1993ರ ವೇಳೆಗೆ ಸುಮಾರು 13 ಸಾವಿರಕ್ಕೂ ಹೆಚ್ಚಿನ ಶಾಖೆಗಳು ನಷ್ಟವನ್ನನುಭವಿಸುತ್ತಿವೆ ಯೆಂದು ವರದಿಯಾಗಿದೆ. ಇಂತಹ ಶಾಖೆಗಳನ್ನು ಮುಚ್ಚುವತ್ತ ಹಾಗೂ ಇಡೀ ಬ್ಯಾಂಕಿಂಗ್ ವಲಯವನ್ನೇ ಖಾಸಗಿಯವರಿಗೆ ವಹಿಸಿಕೊಡುವತ್ತ ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ಆಲೋಚಿ ಸುತ್ತಿದೆ.

ಇತ್ತೀಚೆಗೆ ಭಾರಿ ಉದ್ಯಮಗಳು ಹಣಕ್ಕೆ ಬ್ಯಾಂಕುಗಳ ಬದಲು ಷೇರು ಮಾರುಕಟ್ಟೆ, ವಿದೇಶೀ ಬಾಂಡ್ ಮತ್ತು ಇತರ ಹಣಕಾಸು ಸಂಸ್ಥೆಗಳನ್ನು ಅವಲಂಬಿಸುತ್ತಿವೆ. ಅವನ್ನು ಮತ್ತೆ ತಮ್ಮೆಡೆಗೆ ಆಕರ್ಷಿಸಲು ಬ್ಯಾಂಕುಗಳು ಹಲವು ಯೋಜನೆಗಳನ್ನು ಸಿದ್ಧಪಡಿಸು ತ್ತಿವೆ. ಸ್ವಯಂಚಲೀ ಸರಾಫ್‌ಯಂತ್ರಗಳ (ಎ.ಟಿ.ಎಂ) ಮೂಲಕ ದಿನವಿಡೀ ಬ್ಯಾಂಕಿಂಗ್ ವ್ಯವಹಾರ, ಟೆಲಿ ಬ್ಯಾಂಕಿಂಗ್, ಬಾಡಿಗೆ ಖರೀದಿ, ನೇರವಾಗಿ ಹಣ ಹಾಕಲು ತೆಗೆಯಲು ಭಾರಿ ಗ್ರಾಹಕರ ಕಛೇರಿಗಳಲ್ಲಿ ಕಂಪ್ಯೂಟರ್ ಟರ್ಮಿನಲ್ ಅಳವಡಿಕೆ ಇವು ಕೆಲವು.

ಮೇಲೆ ಹೇಳಿದ ಏನೇ ದೂರುಗಳಿದ್ದರೂ ಬ್ಯಾಂಕ್ ರಾಷ್ಟ್ರೀಕರಣ ಬಹುಮಟ್ಟಿಗೆ ಸಫಲವಾಗಿದೆಯೆಂದೇ ಹೇಳಬೇಕು. ನಮ್ಮ ಬ್ಯಾಂಕಿಂಗ್ ವ್ಯವಸ್ಥೆ ಬಲವಾಗಿದೆ. ಸರಿಪಡಿಸಲಾಗದಷ್ಟು ಕೆಟ್ಟಿಲ್ಲ. ಉದಾರ ಆರ್ಥಿಕ ಸುಧಾರಣಾ ನೀತಿಗಳು ಈಗ ಫಲ ತರುತ್ತಿವೆ. ಮೊತ್ತಮೊದಲು ಬ್ಯಾಂಕಿಂಗ್ ಆಡಳಿತದಲ್ಲಿ ರಾಜಕೀಯ ಹಸ್ತ ಕ್ಷೇಪ, ಅಧಿಕಾರಶಾಹಿಯ ಹಾವಳಿ ತಪ್ಪಬೇಕು.

ಇಂದಿನ ಬ್ಯಾಂಕಿಂಗ್ ಉದ್ದಿಮೆಯ ಅಳಿವು ಉಳಿವು ನಮ್ಮ ಆರ್ಥಿಕ ನೀತಿಯ ಮೇಲೆ ನಿಂತಿದೆ. ರಿಸರ್ವ್ ಬ್ಯಾಂಕ್ ಮತ್ತು ಇತರ ಬ್ಯಾಂಕುಗಳ ಆಡಳಿತ ಮಂಡಲಿಗಳು ಕಲೆತು ಈ ದಿಸೆಯಲ್ಲಿ ಯೋಚಿಸಬೇಕಾಗಿದೆ. ●

---


## ನಮೂನೆ IV

ಪತ್ರಿಕೆಯ ಒಡೆತನ ಮತ್ತು ಇತರ ವಿವರಗಳನ್ನು ಕುರಿತ ಹೇಳಿಕೆ
ಪತ್ರಿಕೆಗಳ ನೋಂದಣಿ ಕುರಿತ (ಕೇಂದ್ರದ)
ನಿಯಮಾವಳಿಯ ನಿಯಮ 8ರಂತೆ

**ಪತ್ರಿಕೆಯ ಹೆಸರು :** ಬ್ಯಾಂಕಿಂಗ್ ಪ್ರಪಂಚ

**ಪ್ರಕಟಣೆಯ ಸ್ಥಳ :** ಬೆಂಗಳೂರು 560 002

**ಪ್ರಕಟಣೆಯ ಅವಧಿ :** ತ್ರೈಮಾಸಿಕ

**ಮುದ್ರಕರು :** ಜಿ. ಎಚ್. ಕೃಷ್ಣಮೂರ್ತಿ (ಭಾರತೀಯ), ಮೈಸೂರು ಪ್ರಿಂಟಿಂಗ್ ಪ್ರೆಸ್ 1210, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿ ಪುರಂ, ಮೈಸೂರು 570 001

**ಪ್ರಕಾಶಕರು :** ಪಾ. ರಾಜಗೋಪಾಲ (ಭಾರತೀಯ), ಪ್ರಧಾನ ಕಾರ್ಯದರ್ಶಿ, ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳ ಸಮನ್ವಯ ಸಮಿತಿ (ನೋಂ), 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

**ಸಂಪಾದಕರು :** ಎಚ್ಚೆಸ್ಕೆ (ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಭಾರತೀಯ), 41 ಆರನೆಯ ಮುಖ್ಯ ರಸ್ತೆ, ಸರಸ್ವತೀಪುರಂ, ಮೈಸೂರು 570 009

**ಪತ್ರಿಕೆಯ ಒಡೆತನ :** ಸಮನ್ವಯ ಸಮಿತಿ (ನೋಂ), ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು, 22 ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು 560 002

ಮೇಲೆ ನೀಡಿರುವ ವಿವರಗಳು ನನ್ನ ಸಾಧ್ಯವಾದಮಟ್ಟಿಗಿನ ತಿಳುವಳಿಕೆ ಮತ್ತು ನಂಬಿಕೆಯ ಪ್ರಕಾರ ಸತ್ಯವಾಗಿವೆಯೆಂದು ನಾನು, ಪಾ. ರಾಜಗೋಪಾಲ, ಈ ಮೂಲಕ ಘೋಷಿಸುತ್ತೇನೆ.

**ಪಾ. ರಾಜಗೋಪಾಲ**
**ಪ್ರಕಾಶ**


---

R. N. 36702/83



PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1